ತ್ತುಗಳೂ
ಪ್ರಾಯವ
ವಲ್ಲಿ ಅವು
ಗ್ರಂಥಗಳಲ್ಲಿ
ದೆ. ಭಾಷ್ಯ
ಭಾಷ್ಯವನ್ನು
ಳೂ ಇವೆ.
ತಿಳಿಯುವ
ರುವ ಕ್ಲಿಷ್ಟ
ಕಾರಾದಿಯು
ಗಬಹುದಾದ
ನುಮತಿಯಾಗಿ

ಇದುವರೆಗೆ
ಂತೂ ಜನರ
ಪ್ರಾಯವನ್ನು
ಗಿ ಸಂಗ್ರಹಿಸ
ಹಾಗಿಲ್ಲವಾದ್ದ
ರಿಂದ ಕೆಲವು ಪ್ರತಿಗಳನ್ನು ಮಾತ್ರ ... ತ್ತೇವೆ. ಗ್ರಾಹಕರು ತ್ವರೆಮಾಡಬೇಕು.



ಇದುವರೆಗೆ ಅಚ್ಚಾಗಿರುವ ಗ್ರಂಥಗಳನ್ನು ಕವರಿನ ನಾಲ್ಕನೆಯ ಪುಟದಲ್ಲಿ ಕೊಟ್ಟಿದೆ. ಮಿಕ್ಕ ಉಪನಿಷತ್ತುಗಳೆಲ್ಲ ಬರೆದು ಸಿದ್ಧವಾಗಿವೆ. ಇಷ್ಟರಲ್ಲಿಯೇ ಹೊರಕ್ಕೆ ಬರುತ್ತವೆ.

**ಅಧ್ಯಾತ್ಮಪ್ರಕಾಶಕಾರ್ಯಾಲಯ,**

೨ನೆಯ ಬೀದಿ, ಚಾಮರಾಜಪೇಟೆ,

**ಬೆಂಗಳೂರು ಸಿಟಿ.**

ಅಧ್ಯಾತ್ಮ ಗ್ರಂಥಾವಳಿ

# ಅಧ್ಯಾತ್ಮಗೀತಾವಳಿ

ಲೇಖಕ

ಹರಿಶರಣಾಷ್ಟಕವಿವರಣೆ, ಭಗವಚ್ಛರಣಸ್ತೋತ್ರವಿವರಣೆ,
ಸರ್ವೇಷ್ಟಸಿದ್ಧಿ, ವೇದಾಂತಕಥಾವಳಿ, ವೇದಾಂತಬಾಲಬೋಧೆ
ಮುಂತಾದ ಗ್ರಂಥಗಳನ್ನು ಬರೆದಿರುವ

**ವೈ. ಸುಬ್ಬರಾವ್**



**1927**

**ಬೆಂಗಳೂರು ಸಿಟಿ**

ಬಿ. ಬಿ. ಡಿ. ಪವರ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.



# ಪೀಠಿಕೆ

—*—

ಅಧ್ಯಾತ್ಮಪ್ರಕಾಶಮಾಸಪತ್ರಿಕೆಯಲ್ಲಿ "**ಶಂ**" ಎಂಬ ಹೆಸರಿನಿಂದ ಇಲ್ಲಿರುವ ಕೆಲವು ಗೀತಗಳು ಆಗಲೆ ಪ್ರಕಟವಾಗಿವೆ. ಈಗ ಅವುಗಳ ಜತೆಗೆ ಹೊರಕ್ಕೆ ಬರದೆ ನಿಂತಿರುವ ಇನ್ನು ಕೆಲವನ್ನು ಸೇರಿಸಿ ಸಾಧ್ಯವಾದಮಟ್ಟಿಗೆ ಒಂದು ಕ್ರಮದಲ್ಲಿ ಜೋಡಿಸಿ ಟಿಪ್ಪಣಿಯ ಸಮೇತವಾಗಿ ಪ್ರಕಾಶಮಾಡಿರುವೆನು.

ಕೆಲವು ಪದಗಳ ಮೇಲೆ ಚೌಕಕಂಸಗಳಲ್ಲಿ ಆಯಾ ಮಟ್ಟನ್ನು ತಿಳಿಯುವದಕ್ಕೆ ಅನುಕೂಲವಾಗುವಂತೆ ಪ್ರಸಿದ್ಧವಾದ ಹಾಡುಗಳ ಪಲ್ಲವಿಯ ಭಾಗವನ್ನು ಕೊಟ್ಟಿರುತ್ತದೆ; ಕೆಲವು ಕಡೆಗಳಲ್ಲಿ ಇವು ಧಾಟಿಯನ್ನು ಸೂಚಿಸುವವೇ ಹೊರತು ಅದೇ ತಾಳದ ಮಟ್ಟುಗಳಾಗಿಲ್ಲ. ಚರಣಗಳಲ್ಲಿ ದ್ರುತವಾಗಿ ಹಾಡಬೇಕಾದ ಭಾಗಗಳನ್ನು ದಪ್ಪಕ್ಷರದಲ್ಲಿ ಆಯಾ ಹಾಡಿನ ಮೊದಲನೆಯ ನುಡಿಯಲ್ಲಿ ಮುದ್ರಿಸಿರುತ್ತದೆ. ಉಳಿದ ಕಡೆಯೂ ಹೀಗೆಯೇ ಊಹಿಸಿಕೊಳ್ಳಬೇಕು.

ಸಾಲುಗಳ ಕೊನೆಯಲ್ಲಿ ಅದೇ ಭಾಗವು ಮತ್ತೆ ಮತ್ತೆ ಬಂದರೆ ಒಂದೆರಡಕ್ಷರಗಳನ್ನು ಬರೆದು ° ಹೀಗೆ ಬಲಕ್ಕೆ ಮೇಲುಗಡೆಯಲ್ಲಿ ಸಣ್ಣ ಬಿಂದುವಿನಿಂದ ಸೂಚಿಸಿರುತ್ತದೆ.

ಪದಗಳಿಗೆ ರಾಗತಾಳಗಳನ್ನು ನಿರ್ಣಯಿಸಿಕೊಟ್ಟು ಇನ್ನೂ ಕೆಲವು ಉಪಯುಕ್ತವಾದ ಸೂಚನೆಗಳನ್ನು ಕೊಟ್ಟದ್ದಕ್ಕಾಗಿ ಅರಸೀಕೆರೆಯ ಶ್ರೀಯುತ **ರಾಮಣ್ಣದಾಸ**ರವರಿಗೆ ಕೃತಜ್ಞನಾಗಿರುವೆನು.

ಭಾವಿಕರಾದ ಜಿಜ್ಞಾಸುಗಳಿಗೆ ಹಾಡಿಕೊಂಡು ಪರಮಾರ್ಥ ವಿಷಯವನ್ನು ಆಗಾಗ್ಗೆ ಮನಸ್ಸಿಗೆ ತಂದುಕೊಳ್ಳುವದಕ್ಕೆ ಈ ಗೀತಾವಳಿಯು ಉಪಯೋಗವಾಗುವದೆಂದು ನಂಬಿದ್ದೇನೆ.

**ಚಾಮರಾಜಪೇಟೆ,**
**ಪ್ರಭವಸಂವತ್ಸರ,**
**ಆಶ್ವಿನ ಬಹುಳ ೫.**

**ಗ್ರಂಥಕರ್ತ.**

# ಅಧ್ಯಾತ್ಮಗೀತಾವಳಿ

೧. **ಕಲ್ಯಾಣಿ, ರೂಪಕ.**

ಗಣಪತೀ, ನೀನಿಹಪರಗತಿ ॥ ಪ ॥

ತಂದೆ ತಾಯಿ ನೀನೆ। ಬಂಧು ಬಳಗ ನೀನೆ ॥ ಹಿಂದೆ ಬರುವ ಧರ್ಮಾಧರ್ಮವ। ಚೆಂದದಿ ಬೋಧಿಪೆ ನೀನೇ। ಸಿಂಧುರಾಸ್ಯ ॥ ೧ ॥

ಸರ್ವಕಾರ್ಯಕರ್ತ। ಸರ್ವಫಲದ ಭೋಕ್ತ ॥ ಸರ್ವಕರ್ಮಫಲ ಸಂಯೋಜನೆ। ಗೋರ್ವನೆ ನೀನಹೆ ಶಕ್ತ। ಶರ್ವತನಯ ॥ ೨ ॥

ಅರ್ಥಕಾಮಮೂಲ ಸ। ರ್ವಾರ್ಥದಾನಲೋಲ ॥ ಅರ್ಥಿಯಿಂದ ಧ್ಯಾನಿಸೆ ಪರ। ಮಾರ್ಥವ ತೋರುವ ಲೀಲಾ। ಸಾರ್ಥಮೂರ್ತಿ ॥ ೩ ॥

ಬುದ್ಧಿಸಿದ್ಧಿಗೀಶ। ಪರಿ। ಶುದ್ಧಬುದ್ಧವೇಷ ॥ ಶುದ್ಧಚಿತ್ತ ಭಕ್ತಿಗಮ್ಯ। ಚಂ। ದ್ರಾರ್ಧಭೂಷ ಹೃತದೋಷ। ಸಿದ್ಧಭಾಷ ॥ ೪ ॥

ಶಂಕರಸ್ವರೂಪ । ನತ । ಕಿಂಕರಾರ್ತಿಹ, ಪಾ ॥ ಶಾಂಕುಶಧರ ಮೋದಕಾಭ। ಯಂಕರಹಸ್ತನೆ, ತಾಪಾ। ತಂಕಶಮನ ॥ ೫ ॥

---

೨. **ಹಿಂದೂಸ್ಥಾನಿ ಕಾಪಿ, ಆದಿತಾಳ [''ಬಾರೋ ಮುರಾರಿ'']**

ಕರುಣಿಸುತೆ ಕಾಯೆ। ಕಮಲಜನ ಜಾಯೆ ॥ ಪ ॥

ಚಿರತರಾಮ್ನಾಯೇ । ಡಿತಚರಣೆ ತಾಯೆ ॥ ಅ ॥

ಸುಖಸಂಪಿದಾತತೇ। ನಿಖಿಲೇಪ್ಸಿತಾಕೃತೇ ॥ ಮುಖರಿತಮುಖಕ ಸ। ಮ್ಮುಖವಿಮಲಕೀರ್ತೇ ॥ ೧ ॥

ಮತಿಕರಣಚೋದನೇ । ಮತಿದೋಷನೋದನೇ ॥ ಮತಿಜನಿ ಮೃತಿಸದನೇ ಮ । ಸ್ಮತಿಗೆ ಮಂಗಲಗತಿಯೊಂದನೆ ॥ ೨ ॥

ಅರಿದಗೆ ಸುದೂರೇ । ಅರಿಯದಗೆ ನೀ ಸೆರೆ ॥ ಅರಿವಿಗರಿವು ನೀನಿರ ವಿಗಿರವು । ಪರತರೆ ಶಂಕರೆ ಪೊರೆದು ॥ ೩ ॥

---

೩. ನಾಟಿ, ಝುಂಪೆ.

ಗೆಲವು ನಿನಗೆ ॥ ಪ ॥

ಗೆಲವು ಶ್ರೀಗುರುರಾಯ । ಗೆಲವು ನಿರ್ಜಿತಮಾಯ ।
ಗೆಲವು ಲೀಲಾಕಾಯ । ಗೆಲವಪ್ರಮೇಯ ॥ ಅ ॥

ಗೆಲವು ನಿರ್ಗುಣಸಗುಣ । ಗಳಸು ವಿಾರಿದ ಜಾಣ । ಗೆಲವು ಶಾಂತ್ಯಾಭರಣ । ಶಿವಗುರುಪ್ರಾಣ ॥ ೧ ॥

ಗೆಲವು ಬ್ರಹ್ಮಾನಂದ । ಜಲಧಿಯೊಳು ವಿಂಗೆ ಮಿಂದ । ಗೆಲವು ಗುರುಗೋವಿಂದ । ನೊಲುಮೆಯುಕ್ಕಂದ ॥ ೨ ॥

ಗೆಲವು ಭಾಷ್ಯಾಶ್ಚರ್ಯ । ಕಲನಕೌಶಲಧುರ್ಯ । ಗೆಲವು ದೇಶಿಕ ವರ್ಯ । ಶಂಕರಾಚಾರ್ಯ ॥ ೩ ॥

---

೪. ಬೇಗಡೆ, ಛಾಪು.

ಜನುಮುಸಾರ್ಥಕ್ಯವಿದು । ಭೂಲೋಕದಲಿ ನರ ॥ ಪ ॥

ಜನುಮುಸಾರ್ಥಕ್ಯವಿ । ದನುಮಾನವಲ್ಲವು ।
ಮನುಮುನಿಗಳ ಮತ । ವನುಭವಸಮ್ಮತ ॥ ಅ ॥

ವೇದಶಾಸ್ತ್ರವ ಕೇಳ್ವುದು । ವೇದೋಕ್ತಕರ್ಮವ । ನಾದರ ದಲಿ ಮಾಳ್ಪುದು ॥ ಆದ ಕರ್ಮವನೀಶಗರ್ಪಣೆ । ಗೈದುಕಾಮ್ಯ ನಿಷಿದ್ಧಗಳ ಕಿಡು । ಹಾದಿಯುಲಿ ಕಾಲಿಡದೆ ದುರಿತವ । ಬೂದಿ ಗೈಯುವ ಜಾಣತನವಿದು ॥ ೧ ॥

ಸಂತರ ಸೇವಿಪುದು। ಶಾಂತ್ಯಾದಿಗುಣಗಳ। ಸಂತತ ಭಾವಿಪುದು॥ ಅಂತರಂಗದೆ ಭಕುತಿಯುಲಿ ಭಗ। ವಂತನನು ನೆಲೆಗೊಳಿಸಿ ತತ್ವದ। ಚಿಂತೆಯುಲಿ ಸುಖವಡೆವ ಪರಮೈ। ಕಾಂತವಿರತಿಯನೊಂದಿ ಬಾಳ್ವುದು॥ ೨ ॥

ನಿತ್ಯಾನಿತ್ಯವ ಕಾಂಬುದು ! ಕೈವಲ್ಯಪದವಿಯೆ । ನಿತ್ಯ ಸತ್ಯವಿದೆಂಬುದು॥ಸತ್ಯಚಿತ್ಸುಖರೂಪು ನಿನ್ನದು। ನಿತ್ಯ ಸತ್ಯವಿದೆಂಬ ಸದ್ಗುರು। ಸತ್ಯವಚನದ ನೆಲೆಯ ಮನಗಂ। ಡತ್ಯಧಿಕಹರ್ಷಾಶ್ರುವೇಳ್ವುದು ॥ ೩ ॥

ಪರಮಾತ್ಮನಲಿ ತೋರ್ಪುದು। ಬರುಬಯಲ ಜಗವಿದು। ಪೆರತಿಲ್ಲವೆನುತಿರ್ಪುದು ॥ ಸರುವ ಭೂತಂಗಳೊಳು ತನ್ನನು। ಸರುವ ಭೂತಂಗಳನು ತನ್ನೊಳು। ನಿರುತಕಾಣುವ ಪರಮಯೋಗದೊ । ಳರಿಕೆಗೊಂಡಿಹ ಸಮತೆಯರಿವುದು ॥ ೪ ॥

ಮಾಯೆಯ ವಿಾರುವದು। ಮರವಾಸೆ ಕೆಲಸಗಳಾಯಸ ತೀರುವದು ॥ ಕಾಯಕಾರಣ ಪ್ರಾಣಬುದ್ಧಿಯ। ಬೀಯುವಳಿದು ಶಿವಾತ್ಮಭೂತನಿ । ಕಾಯವೆಂಬೀ ಭೇದವಡಗುತ ! ಮೇಯ ಶಂಕರಗುರುವೆನಿಪ್ಪುದು ॥ ೫ ॥

———

[ಪೆರತು-ಬೇರೆ, ಅರಿಕೆಗೊಂಡಿಹ-ಪ್ರಸಿದ್ಧವಾದ, ಮರವಾಸೆಕೆಲಸಗಳ-ಅವಿದ್ಯಾಕಾಮಕರ್ಮಗಳ.]

**೫. ಬಿಲಹರಿ, ರೂಪಕ.**

ಏಳಿರೇಳಿರಿ। **ಎಚ್ಚರಗೊಳ್ಳಿರಿ** ನೀವಿ। ನ್ನೇಳಿರೇಳಿರಿ ॥ ಪ ॥
ಏಳಿರೇಳಿ ಬಾಳಿ ಬದುಕಿ|ಕೀಳುಸಂಸೃತಿ। **ಕಾಳುಗೊಳಿಸುವರೆ ನೀವಿ।** ನ್ನೇಳಿ ॥ ಅ ॥

ಏಕೆ ಮರೆದಿರಿ?। **ಶುದ್ಧಾತ್ಮನ ಸಮ್ಮೋಹದೊ**। ಳೇಕೆ ಬೆರೆವಿರಿ?॥ ಜೋಕೆ ಕೆಡುವಿರೇಕಿದಿಂತು। ಕಾಕುಬುದ್ಧಿಯ ॥ **ನೂಕುತಲಾತ್ಮನ ಜಾನಿಸು। ತೇಳಿ** ॥ ೧ ॥

ಧರ್ಮವಾಡಿರಿ। ನಿಷ್ಕಾಮದ ಕರ್ಮಂಗಳ। ಮರ್ಮ ನೋಡಿರಿ॥ ಕರ್ಮದ ಫಲ ವಿಮ್ಮಡಿಸುವ। ದೊಮ್ಮೆ ವ್ಯಾಘ್ರ। ಚರ್ಮನ ನಾಮವ ನೆನೆಯುತ। ಲೇಳಿ ॥ ೨ ॥

ಗುರುವ ಕಾಣಿರಿ । ಸಂಸಾರದ ಮಾಯಾಕೃತಿ । ಯಿರವ ಮಾಣಿರಿ ॥ ಸರುವರಲ್ಲಿ ಶರುವಸಿರುವ । ಥರವ ಶಂಕರ । ಗುರುವರ ನೊರೆವುದನಾಲಿಸು । ತೇಳಿ ॥ ೩ ॥

[ಕಾಳುಗೊಳಿಸುವರೆ-ನಾಶಮಾಡುವುದಕ್ಕೆ, ಇಮ್ಮಡಿಸು-ಎರಡರಷ್ಟಾಗು, ಮಾಣಿರಿ-ಬಿಡಿರಿ.]

---

೬. ದೇಶೀತೋಡಿ, ಆದಿತಾಳ.

ಬಿಡು ಬಿಡು ಜಗದ ಸಡಗರವೆಲ್ಲ । ಕೊಡುವದೇನಿಲ್ಲ । ಶಾಂತಿಯನ್ನು ॥ ಪ ॥

ಹೊಲಮನೆ ಹಣವು ಮಹದಧಿಕಾರ । ಹೊಲೆಯು ಸಂಸಾರ ತಿಳಿದು ನೋಡು ॥ ೧ ॥

ಹೆಂಡತಿ ಮಗನು ಮಾವನಳಿಯ । ಖಂಡದ ಗೆಳೆಯರಲ್ಲದೇನು ॥ ೨ ॥

ವಿದ್ಯೆಯೂ ಬುದ್ಧಿಕೌಶಲವೆಲ್ಲ । ಗುದ್ದಿದ ಕಲ್ಲ ಪೋಲ್ಪವಲ್ಲ ॥ ೩ ॥

ಶಂಕರಪದವ ಸಂಬಲು ನೀನು । ಶಂಕೆಯದೇನು ಶಾಂತಿಯ ಹುದು ॥ ೪ ॥

[ಗುದ್ದಿದ ಕಲ್ಲ ಪೋಲ್ಪುವು- ಕಲ್ಲನ್ನು ಗುದ್ದಿದಷ್ಟು ನೋವಾಗುವಂತೆ ಜಗತ್ತಿನ ವಿಷಯದ ವಿದ್ಯಾಬುದ್ಧಿಕೌಶಲಗಳು ಹೆಚ್ಚಿದಷ್ಟೂ, ಕಾಮಕ್ರೋಧಾದಿಗಳು ಹೆಚ್ಚುವವು.]

೭. ಧನ್ಯಾಸಿ, ಆದಿತಾಳ [“ನಾಮಕೀರ್ತನೆ ಅನುದಿನ ಮಾಳ್ಪಗೆ”]

ನಿತ್ಯಾನಿತ್ಯ ವಿವೇಕವನರಿಯದೆ । ಸತ್ತು ಹುಟ್ಟುವರೆಲ್ಲ ॥ ಪ ॥
ನಿತ್ಯವಿದನು ಸುವಿಚಾರದಿ ತಿಳಿದರೆ । ಸತ್ತು ಚಿತ್ತು ಸುಖರಹರಲ್ಲ ॥ ಅ ॥

ಹೆಂಡಿರು ಮಕ್ಕಳು ಹೊಲಮನೆ ಹಣವೆಂ । ದಂಡಲೆಯುವರಲ್ಲ ॥
ಕಂಡು ಕಾಲವಶವೆಲ್ಲವಿದೆಂಬುದ । ಭಂಡತನದಿ ನೆಚ್ಚುವರಲ್ಲ ॥ ೧ ॥

ಹರೆಯ ನಿಲ್ಲದೈಸಿರಿ ನಿಲ್ಲದು ಸೌಂ । ದರಿಯ ನಿಲ್ಲುವದಲ್ಲ ॥ ಹರಣವು ಮಿಂಚಿನ ಪರಿಯೆಂಬುದೆದಿಟ । ಕರದ ವ್ರಣಕೆ ಕೈಪಿಡಿ ಬೇಕಿಲ್ಲ ॥ ೨ ॥

ಹುಟ್ಟಿ ಬೆಳೆದು ಮಾರ್ಪಟ್ಟು ಕುಂದಿ ಕೈ । ಬಿಟ್ಟು ಪೋಪುದೆಲ್ಲ ॥
ಗುಟ್ಟನಿದನು ಗುರುತಿಟ್ಟು ತಿಳಿಯದೇ । ಕಟ್ಟಕಡೆಗೆ ಕೊರಗುವರಲ್ಲ ॥ ೩ ॥

ದೇಹೇಂದ್ರಿಯಗಳೊಳಾತ್ಮ ಬೇರ್ಪಡದೇ | ತಾ ಹುದುಗಿಹನಲ್ಲ॥
ಈ ಹದನನು ತಿಳಿದಾತ್ಮ ನಿತ್ಯನೆಂ। ದೂಹಿಸಲಾರದೆ ಇಹರಲ್ಲ ॥ ೪ ॥

ಮಡಕೆಯ ಮಾರ್ಪಾಡುಗಳದ ನೋಡುವ। ನೆಡೆಗೆ ಸೇರ್ಪುವಿಲ್ಲ॥
ಜಡದೇಹಾದಿಯ ನೋಳ್ಪಾತುಮನದ। ಕೊಡೆಯನಿದನು ಶಂಕರ ಬಲ್ಲ॥

[ಅಂಡಲೆ-ಮೇಲೆ ಬೀಳು, ಆಸಕ್ತಿಯಿಡು; ಹರೆಯ-ಪ್ರಾಯ, ಹರಣ-ಪ್ರಾಣ, ಕೈಪಿಡಿ-ಕನ್ನಡಿ, ಬೇರ್ಪಡದೆ-ಒಂದೇ ರೂಪದಿಂದ, ಹುದುಗಿಹನು-ಸೇರಿರುವನು, ಸೇರ್ಪುವಿಲ್ಲ-ಸೇರಿರುವದಿಲ್ಲ.]

---

೮. ಮೋಹನ, ಅಟತಾಳ. [''ಏಕಮ್ಮ ಸಂಶಯ ಜಾನಕಿ'']

ಶಮದಮಸುಖಸಂಪತ್ತಿ। ಇರೆ। ಶಮಿತವಾಗದೆ ಸಂಸಾರಾರ್ತಿ ॥ ಪ ॥

ಶಮಿಜನಕೆಲ್ಲಿಯ ಭೀತಿ? । ನೆರೆ ನೋಡೆ । ಶಮನನೆ ನಡುಗುವ ಸಿದು । ಶಾಸ್ತ್ರೋದಿತರೀತಿ ॥ ಅ ॥

ವಾಜಿಯ ಕಡಿವಾಣದಿಂದ | ಸೆಳೆ! ದೋಜೆಯಿಂ ನಡೆಸುವನಂದ॥
ಮಾಜದಿಂದ್ರಿಯಗಳ ಸಂದ । ನೆರೆ ಹಿಡಿ । ದೀಜಗದೊಳು ವೀರನೆನಿಪ ಬಾಳುವೆಯಿಂದ ॥ ೧ ॥

ಒಳಗೆ ಮನವ ಹಿಡಿಯುತ್ತೆ। ಭೋಗ। ಗಳ ಯೋಚನೆಯ ಬದಿಯೊತ್ತೆ ॥ ಚಳಿಸೆಖೆ ಸುಖದುಃಖ ಮತ್ತೇ। ನೆನ್ನದೆ ಬೆಳೆದ ತಿತಿಕ್ಷೆಯೆ ಸುಳಿವ ಸುಖವು ಮುತ್ತೆ ॥ ೨ ॥

ಗುರುಶಾಸ್ತ್ರಬೋಧೆಯ ನೆಚ್ಚಿ । ಮನ। ದುರುಸಂಶಯವನೆಲ್ಲ ಕೊಚ್ಚಿ ॥ ಶರಿರದ ಭಾಸವು ತುಚ್ಛೀ। ಕೃತವಾಗೆ। ಪರಮಶಂಕರಸುಖದಲಿ ತನ್ನ ಮುಚ್ಚಿ ॥ ೩ ॥

[ಶಮಿತವಾಗದೆ— ನಾಶವಾಗುವುದಿಲ್ಲವೆ?, ಶಮಿ— ಮನೋನಿಗ್ರಹವುಳ್ಳವನು, ಶಮನ-ಯಮ, ವಾಜಿ-ಕುದುರೆ, ಕಡಿವಾಣ-ಲಗಾಮು, ಓಜೆ-ಕ್ರಮ, ಅಂದ-ಹಾಗೆ, ಮಾಜದೆ-ಮುಚ್ಚುಮರೆಯಿಲ್ಲದೆ, ಸಂದ-ಮರ್ಮವನ್ನು, ಶಂಕರಸುಖ-ಆತ್ಮಾನಂದ.]

---

೯. ಸುರಟಿ, ಅಟತಾಳ [ 'ಮಂಗಲ ರಾಮೇಶ್ವರಗೆ']

ನಂಬದಿರೆಲವೊ ಮಾನವನೆ | ಇದ | ನಂಬಿ ಪಡುವೆ ಬಲುಭವಣೆ ॥ ಪ ॥

ನಂಬುವರೇ ಮಣ್ಣಬೊಂಬೆ ಈ ದೇಹವ | ನಂಬಿಸಿ ಸೌಖ್ಯದ ಹಂಬಲ ಬಿಡಿಪುದ ॥ ಅ ॥

ಎಲ್ಲಿಂದಲೊ ಬಂದಿಹುದು | ಮತ್ತಿ | ದೆಲ್ಲಿಗೊ ಹೋಗುತಲಿಹುದು ॥ ಇಲ್ಲಿಯೇ ಇರುವೆನೆಂದೆಲ್ಲರ ನೆಚ್ಚಿಸಿ | ಮೆಲ್ಲನೆ ಮರೆಯಾಗಿ ನಿಲ್ಲುವ ತನುವಿದ ॥ ೧ ॥

ತಾಯ ಬಳಿಯಲಿ ತೋರುವದು | ಮತ್ತೆ ಜಾಯೆಯ ಕೆಲಕೆ ಸಾರುವದು ॥ ಆಯಾಸದ ಮುದಿನಾಯ ಮಾಡುವದಿಂತು | ಮಾಯೆದೆ ಮುಳುಗಿಪ ಹೇಯಕಾಯವನಿದ ॥ ೨ ॥

ಒಗೆವ ಕಾಂತಿಯಲಿ ಮೆರೆವದು | ಮತ್ತೆ | ಬಿಗಿವ ದರ್ಪದಲಿ ಬೆರೆವುದು ॥ ಹಗರಣ ಬಡಿಸಿ ಚೆಂಬೊಗರ ಚೆಲ್ವೆಯರಿಂ | ದೊಗಡಿಪ ದುರಿತದೆ ಹೊಗಿಪ ದೇಹವನಿದ ॥ ೩ ॥

ಮಿಥ್ಯಾಭೋಗವನೆ ತೋರುವದು | ಕೃತ್ಯಾ | ಕೃತ್ಯದರಿವನು ಮೀರುವದು ॥ ನಿತ್ಯವಿದೆಂಬುವಮರ್ತ್ಯರಭವದಲಿ | ಸುತ್ತಿಸಿ ಕೊಲ್ಲುವ ಮೃತ್ಯುವೊಡಲನಿದ ॥ ೪ ॥

ಶಂಕೆಯಿಲ್ಲದೆ ಓಡಾಡುವದು | ಪಾಪಾ | ತಂಕವ ನೊಡ್ಡಿ ಕಾಡುವದು ॥ ಶಂಕರ ನೊಲುಮೆಯ ಸೋಂಕ ತಪ್ಪಿಸಿ ತಾನು | ಬೆಂಕಿಯ ಬೀಳುವ ಮಂಕಿನಾಕೃತಿಯಿದ ॥ ೫ ॥

[ಭವಣೆ-ಭ್ರಮಣೆ, ಹಂಬಲ-ಆಸೆಯನ್ನು, ಜಾಯೆ-ಹೆಂಡತಿ, ಕೆಲ-ಹತ್ತಿರ, ಬೆರೆ-ಗರ್ವಿಸು, ಚೆಂಬೊಗರ-ಕೆಂಪು ಕಾಂತಿಯ, ಒಗಡಿಪ-ಓಕರಿಸುವ, ಅಸಹ್ಯವಾದ; ಒಡಲು-ಶರೀರ, ಮಂಕಿನಾಕೃತಿ-ಅಜ್ಞಾನದ ಶರೀರ.]

---

### ೧೦. ರೇಗುಪ್ತಿ, ಆದಿತಾಳ.

ಇವರೇ ಹಿರಿಯವರು | ಲೋಕದೊಳಿ | ವರೇ ಹಿರಿಯವರು ॥ ಪ ॥

ಸತ್ಯವ ಬಿಡದಿಹರು | ಅಸತ್ಯಕೆ | ಮೃತ್ಯುವೆಂದೆನಿಸಿಹರು ॥ ಕೃತ್ಯಾಕೃತ್ಯ ವಿವೇಕವ ನಡೆಯೊಳು | ನಿತ್ಯತೋರಿ ಪುರು | ಷೋತ್ತಮರೆನಿಪರು ॥ ೧ ॥

ಧರ್ಮಕೆ ನೆರೆಯಹರು | ಬರು ಹೆಮ್ಮೆಯ | ಕರ್ಮಕೆ ಮರೆಯಹರು | ಹಮ್ಮನುಳಿಯುವಾ ಕರ್ಮಯೋಗದೊಳ | ಮರ್ಮವ ಲೋಕಕೆ ಕೆಮ್ಮನೆ ಸಾರುವ | ರಿವರೇ ॥ ೨ ॥

ಗರುವವ ನುಳಿದಿಹರು | ಪರರೇಳಿಗೆ | ಗಿರದೆ ಹಿಗ್ಗುತಿಹರು | ಧರೆಯುಪಕಾರಕೆ ತುರುವ ಕಾಯ್ವ ಶ್ರೀ | ಹರಿಯ ಪೋಲ್ವ ಶಂಕರ ಚರಿತರು ಧರೆ | ಗಿವರೇ ॥ ೩ ॥

[ನೆರೆ-ಸಹಾಯ, ಹಮ್ಮನು-ಅಹಂಕಾರವನ್ನು, ಕೆಮ್ಮನೆ-ಸುಮ್ಮನೆ, ಉಳಿದಿಹರು-ಬಿಟ್ಟಿರುವವರು, ತುರು-ಹಸು, ಶಂಕರಚರಿತರು-ಮಂಗಲವಾದ ನಡತೆಯವರು.]

---

**೧೧. ಹುಸೇನಿ, ಆದಿತಾಳ.**

ಮಾಯಾಪಾಶದ ಬಂಧದೆ ಬರಿದೇ | ನೋಯದಿರೆಲವೋ ಮಾನವ ॥ಪ॥
ಮಾಯಾತೀತ ನೀನಾಗುವ ಪರಮೋ | ಪಾಯವ ಮಾಡೆಲೋ ಮಾನವ ॥ ಅ ॥

ಈ ಲೋಕದ ಪರಲೋಕದ ಸುಖದೊಳು | ಲೋಲನಾಗದಿರೋ ಮಾನವ ॥ ಮೇಲೆ ಮೇಲೆ ನೀನಿದರ ದೋಷಗಳ | ನಾಲೋಚಿಸುತಿರು ಮಾನವ ॥ ೧ ॥

ರಾಗದ್ವೇಷದ ಸೆಳೆತಕೆ ಸಿಲ್ಕದೆ | ಜಾಗರೂಕನಿರೊ ಮಾನವ ॥ ನೀಗಿ ಮೋಹದಾವರಣವ ನಿಲ್ವ ಸು|ಯೋಗವನರಸೋ ಮಾನವ ॥೨॥

ಸೈಯೆನುತಡಿಯಿಡೆ ಮಾಯವಾಗುವವು | ಹೇಯವಿಷಯವಿವು ಮಾನವ ॥ ಛೀಯೆನ್ನುತ ಹಿಂದಿರುಗಲು ಬೆನ್ನೊಳೆ | ನಾಯಂತೆ ಬಹವು ಮಾನವ ॥ ೩ ॥

ಪಡೆದೊಡೆ ದುಃಖವು ಪಿಡಿದೊಡೆ ದುಃಖ ಕೈ | ಬಿಡಲುರೆ ದುಃಖವು ಮಾನವ ॥ ಕೆಡದಿರು ವಿಷಯದ ಗೊಡವೆಗೆ ಹೋಗಿ ಸಂ| ಗಡಿಪುದು ಸಂಕಟ ಮಾನವ ॥ ೪ ॥

ಇಂದ್ರಜಾಲವೀ ಸರ್ವಪ್ರಪಂಚ ಸಿ । ಸ್ತಂದ್ರಿಯೊಳಿದ ತಿಳಿ ಮಾನವ ॥ ಇಂದ್ರಿಯಗಳ ಗೆಲು ಶಂಕರ ಗುರುವರ ॥ ಸಾಂದ್ರ ಭಕುತಿ ಯೊಳೀ ಮಾನವ ॥ ೫ ॥

[ಬೆನ್ನೊಳಿ-ಹಿಂದೆಯೆ, ಉರೆ-ಹೆಚ್ಚಾದ, ಸಂಗಡಿಪುದು-ಉಂಟಾಗುವದು, ನಿಸ್ತಂದ್ರಿ-ನಿರಾಲಸ್ಯ.]

---

೧೨. ಮುಖಾರಿ, ಆದಿತಾಳ.

ಬಿಡುವನೆಂದಿಗೆ ನೀ ಕಾಣ್ಬೆ । ಮನುಜ ॥ ಪ ॥
ಕಡುತಾಪವೆಂದಿಗೆ ಮಾಣ್ಬೆ । ಮನುಜ ॥ ಅ ॥

ಬೆಳಗಿಂಡ ಬೈಗಿನ ಪರಿಯಂತ । ಮನುಜ । ಮಳುಗಿರ್ಪೆ ಕಾರ್ಯ ದೊಳಿಂಥ ॥ ಬಳಿವೋಗಿ ಸಂತರ ಪಂಥ । ತಳೆದಂದು ಶಾಂತಿಯನಂತ ॥ ಮನುಜ ॥ ೧ ॥

ಪಲವಾತನಾಡುತಲಿಪ್ಪೆ । ಮನುಜ । ಬಲಕುಂದೆ ಬರ್ಪುದು ಮುಪ್ಪೇ ॥ ಒಲಿ ದೇವನಾಮಕೆ ಬೆಪ್ಪೆ, । ಹಲಿಸೋದರನೆ ನೀನಪ್ಪೆ ॥ ಮನುಜ ॥ ೨ ॥

ಮನದಲ್ಲಿ ಯೋಜನೆಯೇಂ ಮಾಳ್ಪೆ । ಮನುಜ । ಜನುಮಂಗ ಳೆನಿತನು ನೋಳ್ಪೆ?॥ ಕುಣಿದೇಕೆ ಭೋಗವ ಬೇಳ್ಪೆ?। ನೆನೆ ಶಂಕರಾತ್ಮನ ಬೆಳ್ಪೆ ॥ ೩ ॥

[ಬಿಡುವ-ವಿರಾಮವನ್ನು, ಬೈಗು-ಸಂಜೆ, ಪಲವಾತನು-ಬಹಳ ಮಾತನ್ನು, ಹಲಿ ಸೋದರ-ಕೃಷ್ಣ, ಬೇಳ್ಪೆ-ಬೇಡುವೆ, ಬೆಳ್ಪೆ-ಬೆಪ್ಪೆ]

---

೧೩. ಕಾಂಬೋಧಿ, ಅಟತಾಳ. [‘ಮನವೇ ಮರೆವರೇನೋ ಹರಿಯ’]

ಬರಿದೆ ತೊಳಲದಿರು ಮನವೆ।ಥರ।ಥರದ ಜನ್ಮವನೊಂದುವದು ಜಾಣತನವೆ? ॥ ಪ ॥

ಮರಹು ನಿದ್ರೆಯ ಗೆಲು ನೀನು।ಬರಿ।ಮರಗಿಡವಾಗಿ ಬೆಳೆದು ಫಲವೇನು? ॥ ತೆರೆದು ಕಂಗಳ ನೋಡುತಿನ್ನು।ಬಿಡ।ದೊರನು ಸತ್ಕರ್ಮದಿ ತಾಮಸವನ್ನು ॥ ೧ ॥

ತೊರೆ ಕೋಪತಾಪವನೆಲ್ಲ । ಹಿಂದಿ । ನರಿನಾಯಿಯಂತೆ ಬಾಳ್ವುದು ಸರಿಯಲ್ಲ ॥ ಹರಿತತ್ತ್ವವನು ಪೇಳಬಲ್ಲ । ಸಜ್ಜ । ನರ ಸೇರಿದರೆ ರಜೋಗುಣ ಸೋಂಕದಲ್ಲ ॥ ೨ ॥

ಸಾತ್ವಿಕನೆನೆ ಹಿಗ್ಗಲೇಕೆ? । ಶ್ರೋತ್ರಿ । ಯತ್ವದ ಜನುಮಂಗಳಿರುತಿರೆ ಸಾಕೆ? ॥ ತತ್ತ್ವವ ತಿಳಿಯಲು ಬೇಕೆ । ಶಂಕ । ರತ್ವವೆ ಶುದ್ಧ ಸಾತ್ವಿಕವೆನು ಜೋಕೆ ॥ ೩ ॥

[ಸತ್ಕರ್ಮದಿಂದ ತಮಸ್ಸನ್ನೂ ಸತ್ಸಂಗದಿಂದ ರಜಸ್ಸನ್ನೂ ಜ್ಞಾನದಿಂದ ಸತ್ತ್ವವನ್ನೂ ಮೀರಬಹುದು.]

---

**೧೪.** ಜಂಜೋಟಿ, ಆದಿತಾಳ. [‘ಪಿಬರೇ ರಾಮರಸಂ ರಸನೇ’]

ನುಡಿ ಹರಿನಾಮವನೇ । ರಸನೆ ॥ ಪ ॥

ನುಡಿ ಹರಿನಾಮವ ನಡಿಗಡಿಗೊಲಿದು ನೀ । ಹಿಡಿಯೊಂದು ನೇಮವನೇ ರಸನೆ ॥ ಅ ॥

ಬಿಡು ಜೀಳುಮಾತಿನ । ಬೆಡಗಿಗೆ ಸೋಲ್ವದ ॥
ಕಡಿ ಪಾಪದಾಮವನೇ ॥ ರಸನೆ ॥ ೧ ॥
ಜಗಿಹಿಡಿ ಬಾಹ್ಯದ । ಸೊಗವ ಸವಿವಾಸೆಯ ॥
ಹೊಗು ರಸಧಾಮವನೇ ॥ ರಸನೆ ॥ ೨ ॥
ನಾಮವೆ ಶಂಕರ । ಪ್ರೇಮರಸಾಯನ ॥
ಕಾಮಿಸೀ ಕಾಮವನೇ ॥ ರಸನೆ ॥ ೩ ॥

[ಪಾಪದಾಮ-ಪಾಪದ ಹಗ್ಗ, ಕಡಿ-ಕತ್ತರಿಸು, ಬೀಳುಮಾತುಗಳೇ ಪಾಪದ ಮೂಲ. ರಸಧಾಮ-ರುಚಿಯ ಮನೆ, ಪರಮಾತ್ಮನ ನಾಮ.]

---

**೧೫.** ಬೇಹಾಗ್, ಆದಿತಾಳ.

ನಾಲಗೆಯೇ, ಹರಿನಾಮಾಮೃತವನು ಕುಡಿಕುಡಿ ಬೇಗ । ಕುಡಿಕುಡಿ ಬೇಗ ॥ ಪ ॥

ನಾಳೆ ನಾಡಿದು ಎನಬೇಡ, ಕೆಡಬೇಡ । ನಾಲಗೆಯೇ ॥ ಅ ॥

ಸವಿಸವಿಯೂಟವ | ಸವಿದೊಡದೇನೋ ॥
ಸವೆಯಲು ತೇಜವು ಸಪ್ಪೇ, ಛೀ ಬೆಪ್ಪೇ | ನಾಲಗೆಯೇ॥ ೧ ॥
ರುಚಿಯೆಲ್ಲಕೆ ರುಚಿ, | ಶುಚಿ, ಬಲಕಾರಿ ॥
ಉಚಿತವೆ ಬಿಡುವದು ನೋಡು, ತ್ವರೆ ಮಾಡು|ನಾಲಗೆಯೇ॥೨॥
ಪುಂಕ ಬಿಡಿಸುವದು | ಸಂಕಟಹಾರಿ ॥
ಶಂಕರ ಪಾನಪ ಗೈದ, ಶಿವನಾದ | ನಾಲಗೆಯೇ ॥ ೩ ॥

[**ತೇಜವು-ನಾಲಿಗೆಯ ಬಲ.**]

---

**೧೬.** **ಮುಖಾರಿ, ಆದಿತಾಳ.** [**'ಮಂದರಗಿರಿಧರನೆ'**]

ನಾಮಸ್ಮರಣೆ ಮಾಡಿ।ಭಗವನ್ನಾಮ ॥ ಪ ॥

ನಾಮವೆ ಪರಸುಖ।ಧಾಮವಹುದು ಕಡು।ನೇಮದಿನಿದ ಕೂಡಿ । ಭಗವನ್ನಾಮ ॥ ಅ ॥

ಪಾಪಕರ್ಮ ನಿರ್ಲೇಪರಾಗಿ ಹೃ । ತ್ತಾಪವ ಪುಡಿಮಾಡಿ ॥೧॥
ಕಾಮುಕರ್ಮಗಳಿ।ಗೇ ಮನಗೊಡದಿಹ।ನಾಮವ ಬಿಡಬೇಡಿ॥೨
ಹಮ್ಮು ಕಳೆವ ಪರ । ಬೊಮ್ಮ ಶಂಕರನ।ನೊಮ್ಮೆ ನೆನೆದು ನೋಡಿ ॥ ೩ ॥

[**ಪರಸುಖ-ಹೆಚ್ಚಿನ ಕೈವಲ್ಯ, ಪರಬೊಮ್ಮ-ಪರಬ್ರಹ್ಮ.**]

---

**೧೭.** **ಖಮಾಚ್, ಆದಿತಾಳ.**

ಹರಿಕೀರ್ತನೆ ಮಾಡೇಳಿರೆಲೆ ಜನ ॥ ಪ ॥

ಹರಿಕೀರ್ತನೆಯೇ ಪರಗತಿಸಾಧನ।ತುರಿಹದಿ ಕೈಕೊಂಡೇಳಿ।ರೆಲೆ ಜನ॥

ಹಣಿಯ ಮರೆತು ಸಂ । ಸರಣಸಿದ್ರೆಯಲಿ ।
ಗೊರಕೆಯಿಡದೆ ಇನ್ನೇಳಿರೆಲೆ ಜನ ॥ ೧ ॥
ಮೂರುಘಳಿಗೆ ಜಗ ತೋರಿ ಹಾರುವದು।
ಸಾರವಿಲ್ಲ ಕನಸೇಳಿ।ರೆಲೆಜನ ॥ ೨ ॥

ಅಚ್ಯುತ ಶಂಕರ। ವುಚ್ಚ ಪದವಿ ಹರಿ।
ಮೆಚ್ಚುವ ಕೀರ್ತನೆ ಏಳಿ। ರೆಲೆ ಜನ ॥ ೩ ॥

[ ತುರಿಹ-ಬೇಗ, ಅಚ್ಯುತಶಂಕರವುಚ್ಚಪದವಿ--ನಾಶವಿಲ್ಲದ ಸುಖಕರವಾದ ಉನ್ನತವಾದ ಸ್ಥಾನ.]

---

೧೮. ಆನಂದಭೈರವಿ, ಅಟತಾಳ.

ನಾರಾಯಣ ಎನ್ನಿರೊ। ನೀವೆಲ್ಲರು ॥ ಪ ॥

ನಾರಾಯಣ ಎಂಬ ಸರಸ ಪಾಪಗಳೆಲ್ಲ । ಹಾರಿಹೋಗುವದೆಂದು ಶ್ರುತಿ ಸಾರುತಿದೆಯಾಗಿ ॥ ಅ ॥

ಕರ್ಮ ನಾರಾಯಣನು । ಉಪಾಸನಾ । ಮರ್ಮ ನಾರಾಯಣನು ॥ ಕರ್ಮಗಳಿಗೆ ಫಲದಾತ ನಾರಾಯಣ। ಕರ್ಮರಹಿತ ನಿತ್ಯ ಶರ್ಮನಾರಾಯಣ ॥ ೧ ॥

ಚಿತ್ತ ನಾರಾಯಣನು। ಸಾಧಕ ಸಿದ್ಧ। ವೇತ್ತ ನಾರಾಯಣನು॥ ಚಿತ್ತಶುದ್ಧಿಯಲಹ ತಿಳಿವು ನಾರಾಯಣ । ಚಿತ್ತಲಯಿಸೆ ಕಂಡತ್ತ ನಾರಾಯಣ ॥ ೨ ॥

ಜೀವ ನಾರಾಯಣನು । ಜೀವಾರಾಧ್ಯ । ದೇವ ನಾರಾಯಣನು ॥ ಜೀವರೆಲ್ಲರ ಪರಜೀವ ನಾರಾಯಣ। ಜೀವಶಂಕರಗುರುದೇವ ನಾರಾಯಣ ॥ ೩ ॥

[ಶ್ರುತಿ-ನಾರಾಯಣೋಪನಿಷತ್ತು, ಕರ್ಮರಹಿತ-ಕರ್ಮಸಂಬಂಧವಿಲ್ಲದ, ನಿತ್ಯ ಶರ್ಮ-ನಿತ್ಯಸುಖ, ಚಿತ್ತಲಯಿಸೆ-ಮನಸ್ಸುಕರಗಿಸಿದರೆ, ಪರಜೀವ-ಇರುವದಕ್ಕೆ ಆಧಾರ ನಾದ, ಜೀವಶಂಕರ-ಜೀವರಿಗೆ ಒಳ್ಳೆಯದನ್ನು ಮಾಡುವ.]

---

೧೯. ಖಮಾಚ್, ಆದಿತಾಳ. [ 'ಸಾರಸಸಮಮುಖ']

ಇನ್ನಾದರೆಯು ನೀ ನೆನೆಯೆಲೊ ಪರಶಿವನ। ಮನವೆ ॥ ಪ ॥

ಮುನ್ನಿನಂತೆ ನೀ ಬನ್ನಬಡದೆ । ಮುಂಸಿ ಮಾನ್ಯಪದವ ಪಡೆ ಧನ್ಯ ನೆನಿಸು ॥ ಅ ॥

ನೂರಾರು ಯೋನಿಯ ಸಾರಿ ಭವದೊಳು। ಏರಿ ನೊಂದೆಯಲ ಬಹಳ ॥ ಪುರಾರಿನಾಮವು ಪುರಾತ್ತ್ರದುರಿತವ। ಸುರಿಸಿ ಬೂದಿಗೈದಿರಿಸುವದಲೆ ॥ ೧ ॥

ದೇಹಧರ್ಮಕರ್ಮಗಳ। ಮಮತೆಯ। ಸಾಹಸದಿಂ ಜವಸಿಗಳ। ಬಾಹುದವಿದ್ಯಾಮೋಹದಹಂಮಮ । ತಾಹರ ನಾ ಹರನೋರ್ವನೆಂದು ॥ ೨ ॥

ಶಂಕರಪದದಲ್ಲಿಂಬು। ಭವದೆ ಭ। ಯಂಕರ ತಾಪಕೆ ಕೂರಂಬು। ಸಂಕಟಜನಿವೃತಿಯಂ ಕಾಣದ ಬಲು । ಬಿಂಕದ ತಾಣದ ಲೆಂಕನ ಹೆಯೊ ॥ ೩ ॥

[ಬನ್ನ-ಭಂಗ, ತೊಂದರೆ; ಭವ-ಸಂಸಾರ, ಪುರಾತ್ತ್ರ-ಹಿಂದೆ ಪಡೆದ, ಜವಸಿಗಳ-ಯಮನಿಂದಾಗುವ ಬೇಡಿ, ಇಂಬು-ಆಶ್ರಯ, ಕೂರಂಬು-ಕ್ರೂರವಾದ ಬಾಣ, ಜನಿ-ಹುಟ್ಟುವದು, ಬಿಂಕ-ಗರ್ವ, ತಾಣ-ಸ್ಥಾನ, ಲೆಂಕ-ಭಂಟ, ವೀರ.]

---

**೨೦.** ಕಾನಡ, ಅಟತಾಳ. [‘ಕೆರೀರೇ ಕಾಂತನ ಬೇಗ’]

ಭವನಾಮಕೀರ್ತನೆ । ಭವನೌಕೆಯು ॥ ಪ ॥

ಭವನಾಮಕೀರ್ತನೆ । ಭವಿಗಳಿಗೊದಗೆ ಸಂ। ಭವಿಸದು ಪಾಪಾಸು। ಭವವಿನ್ನೆಂದೆಂದಿಗು ॥ ಅ ॥

ವಿಷಯಗಳಾಸೆಯು । ವಿಷವಾಗಿ ದಿನದಿನ । ವಿಷಕಂಠನೇ ಮನೋ। ವಿಷಯನಾಗುವ ನಿತ್ಯ ॥ ೧ ॥

ಸಾಧುಜನರ ಸಂಗ । ಸಾಧಿಸಿ ಚಿತ್ತ ಸ । ಮಾಧಾನದಿಂ ಶಿವಾ। ರಾಧನೆ ಗೈಸುವ ॥ ೨ ॥

ಮಂಕ ತೆಗೆದು ಸರ್ವ। ಸಂಕಟಹರವಾದ । ಶಂಕರಾನಂದದೆ। ತೇಂಕಾಡಿಸುವ ಭವ್ಯ ॥ ೩ ॥

[ಭವನಾಮ-ಶಿವನಾಮ, ಭವನೌಕೆ-ಸಂಸಾರಸಾಗರಕ್ಕೆ ಹಡಗು, ಭವಿ-ಸಂಸಾರಿ, ತೇಂಕಾಡಿಸುವ-ತೇಲಾಡಿಸುವ, ಭವ್ಯ-ಮಂಗಳಕರ.]

---

೨೧. ಖರಹರಪ್ರಿಯ, ಆದಿತಾಳ.

ದಾರಿಯ ಬಿಡಿ ನೀವೀಗ । ಇನ್ನು ॥ ಪ ॥
ದೂರಕ್ಕೆ ಸರಿಯಿರಿ ಬೇಗ ॥ ಅ ॥
ಅರು ಮಂದಿಯು ಸೇರಿ । ಗಾರುಗೆಡಿಸಿದಿರಿ ।
ಸೇರುವೆ ನಾ । ಮುರವೈರಿಯ ಬೇಗದಿ ॥ ೧ ॥
ಸಂಕಲ್ಪಮಾಡುತೆ । ಮಂಕಸಾದೆನು ।
ಸಂಕಟಹರ ಶ್ರೀವ । ತ್ಸಾಂಕನ ಸೇರುವೆ ॥ ೨ ॥
ಕ್ರೋಧಾದಿರೂಪವಿ । ಭೇದವ ನೊಂದುತೆ ।
ಹಾದಿಯ ಕಟ್ಟಿದಿ । ರೇ ದುರುಳರೆ ಇನ್ನು ॥ ೩ ॥
ಇನ್ನು ನೀವೆನ್ನನು । ಬನ್ನ ಬಡಿಸಲಾರಿ ।
ರೆನ್ನೊಡೆಯನು ಸಿರಿ । ರನ್ನ ಕಾಪಾಡುವ ॥ ೪ ॥
ಶರಣೆಂದಿರುವೆ ಶಂ । ಕರನಾಮ ಶ್ರೀಹರಿ ।
ಗರಿಷಡುವರ್ಗಕೆ ।ಬರಿದೆ ಬೆದರುವೆನೆ ॥ ೫ ॥

[ಗಾರುಗೆಡಿಸಿದಿರಿ-ಕಷ್ಟಪಡಿಸಿದಿರಿ, ಕ್ರೋಧಾದಿ-ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ.]

---

೨೨. ದರ್ಬಾರು, ಆದಿತಾಳ.

ನಾಮಸಂಕೀರ್ತನೆ । ಸಮಗಿರಲೇಗಳೂ ॥ ಪ ॥
ಮಾಮನೋಹಾರಿ ಶ್ರೀ । ಶೌರಿ ನಾರಾಯಣನ ॥ ಅ ॥
ಬೆಳಗಿನ ಜಾವದೊ । ಳಳಿಯಲು ನಿದ್ರೆಯು ।
ಬೆಳಕುಗಳೆಲ್ಲಕೂ । ಬೆಳಕಹ ದೇವನ
ಸ್ನಾನಸಂಧ್ಯಾಜಪ । ಧ್ಯಾನದ ಕಾಲದೆ ।
ಮಾನಸಿಹೃನ್ಮಂದಿರ । ಜ್ಞಾನದೀಪಾಯಿತನ
ನಡುಹಗಲಾಗಲು । ಪಡೆದುದ ಭುಂಜಿಸಿ ।
ಅಡಿಗಡಿಗಾ ಜಗ । ದೊಡೆಯ ಗೋವಿಂದನ
ಜೀವನಯಾತ್ರೆಗೆಂ । ದೇ ವ್ಯವಹಾರವ ।
ನಾವೆಸಗುತ್ತಿರೆ । ಕಾವ ಕರುಣಾಳುವ



ಕನಸಿಲಿ ಕಂಡುದ | ನೆನಸುತ್ತೆ ನಾವಿರೆ |
ಅನಘ ತತ್ತ್ವಾರ್ಥವ | ನನುಗೊಳಿಪ ಶಂಕರ ॥ ೫ ॥
[ಮಾಮನೋಹಾರಿ-ಲಕ್ಷ್ಮೀಪತಿ, ಅನುಗೊಳಿಪ-ಕೂಡಿಸುವ, ಅನುಗ್ರಹಿಸುವ.]

---

೨೩. ಬಿಲಹರಿ, ಏಕತಾಳ.

ರಾಮಕೃಷ್ಣ ಗೋವಿಂದ । ರಕ್ಷಿಸೆಮ್ಮ । ನಿತ್ಯಾನಂದ ॥ ಪ ॥
ರಾಮಕೃಷ್ಣ ಗೋವಿಂದ | ರಾಗವಿದೂರ ಪರಮಾನಂದ ॥ ಅ ॥

ಹತ್ತವತಾರವೆತ್ತಿದುದಾರ । ಸತ್ಯಧರ್ಮಗಳ ಸಲಹಿದ ಧೀರ ।
ಉತ್ತಮಗುಣಕರ್ಮಗಳಸು ಪೂರ। ಬಿತ್ತರಿಸುವ ಲೀಲೆಗಳಾಧಾರ ॥೧॥
ಆದಿಗಾದ್ಯ ವೇದವೇದ್ಯ | ವೇದಾಂತೋದಿತಲಕ್ಷಣ ಹೃದ್ಯ ।
ವಾದಿತಾರ್ಕಿಕವ್ರಾತಕಭೇದ್ಯ। ಬಾಧಿತ ಸಂಸೃತಿಮೂಲಾವಿದ್ಯ ॥ ೨ ॥
ನಾಮರೂಪ ಕರ್ಮವಿಲಾಪ । ಕಾಮಿತದಾಯಕ ಕರುಣಾ
ರೂಪ । ಶಾಮಿತಶರಣಾವಳಿಹೃತ್ತಾಪ । ತಾಮಸಹರ ಶಂಕರ
ಚಿದ್ದೀಪ ॥ ೩ ॥
[ಬಿತ್ತರಿಸು-ವಿಸ್ತರಿಸು, ಹೃದ್ಯ-ಮನೋಹರ, ವಿಲಾಪ-ಕರಗಿಸುವವನು, ಶಾಮಿತ
-ಹೋಗಲಾಡಿಸಿದ.]

---

೨೪. ಮಾಯಾಮಾಳವಗೌಳ, ರೂಪಕ.

ನಿನ್ನ ನಂಬಿದೇ । ಸಿಗಮವಿಸುತ ॥ ಪ ॥
ಸನ್ನತಪತಿತಾವನ। ಸುನ್ನದೋಷಗುಣಗಣ ಶಿವ ॥ ಅ ॥

ಪಂಚಬ್ರಹ್ಮಖ್ಯಾಪಿತ ! ಪಂಚಾನನಸುವಿಭೂಷಿತ ।
ಪಂಚಾಕ್ಷರಮಂತ್ರಗೀತ | ಪಂಚಭೂತಾತೀತ ॥ ೧ ॥
ಜಗದ ಜನ್ಮದಲ್ಲಿ ಭವನು । ಜಗವ ಪಾಲಿಪಲ್ಲಿ ಮೃಡನು |
ಜಗದ ಲಯದೆ ಹರನೆನಿಸುವ। ತ್ರಿಗುಣರಹಿತ ಶಿವನೆ ದೇವ॥ ೨ ॥
ವಿಷಯಭೋಗದಲ್ಲಿ ಜೀವ । ವಿಷಯತ್ಯಾಗದಲ್ಲಿ ದೇವ |
ವಿಷವಿಭೂಷಕಂಠ ಶಂಕರ | ಸುಷಮಾಸ್ತಮೋಹದೋಷ॥ ೩ ॥

[ಸುನ್ನದೋಷ-ಹೋಗಲಾಡಿಸಿದ ದೋಷವುಳ್ಳ ಪಂಚಬ್ರಹ್ಮ-ಸದ್ಯೋಜಾತಾದಿ ಮಂತ್ರಗಳು, ಶಂಕರಸುಷಮಾ-ಮಂಗಲಕರವಾದ ತೇಜಸ್ಸು, ಅಸ್ತಮೋಹದೋಷ-ಹೋಗಲಾಡಿಸಲ್ಪಟ್ಟ ಕತ್ತಲೆಯುಳ್ಳ.]

———

**೨೫.** ಖರಹರಪ್ರಿಯ, ಆದಿತಾಳ.

ಬೇಡುವೆ ದೇವ । ಜೋಡಿಸಿ ಕರವ ॥ ಪ ॥
ನೀಡೆನಗೀ ಮೂರನು । ಕೂಡಿಹ ವರವ ॥ ಅ ॥

ಬಾಲರು ಗೆಳೆಯರ । ಮೇಳದೆ ಸುಖಿಸುವ ।
ಪೋಲುವೆಯಿಂ ನಿನ್ನೊಳೇ । ಕೀಲಿಸಿದ ನಡೆಯು ॥ ೧ ॥

ಮರುಳರು ಬರಿದೇ । ಜರುಚುವ ಪರಿಯಲಿ ।
ನಿರುತವು ನಿನ್ನನೇ । ಸ್ಮರಿಸುವ ನುಡಿಯು ॥ ೨ ॥

ಮುದುಪರು ಚಿಂತೆಗ । ಳೊದವಿನೊಳ್ ಸಿಲ್ಕಿಹ ।
ವಿಧದೆ ಶಂಕರನೊಳೇ । ಹುದುಗಿಹ ಬಗೆಯು ॥ ೩ ॥

[ಮೇಳ-ಜತೆ, ಪೋಲುವೆ-ರೀತಿ, ಕೀಲಿಸಿದ-ಸಂಬಂಧಿಸಿದ, ಜರುಚುವ-ಹರಟುವ, ಮುದುಪ-ಮುದುಕ, ಒದವು-ಪ್ರಾಪ್ತಿ, ಸಿಲ್ಕಿಹ-ಸಿಕ್ಕಿರುವ.]

———

**೨೬.** ಭೈರವಿ, ಆದಿತಾಳ.

ದಯಮಾಡೊ ದೇವ ನಿ । ನ್ನಯ ಪ್ರೇಮಸಾರವ ॥ ಪ ॥
ಭಯಶೂನ್ಯವಾದ ನಿ । ರ್ದ್ವಯತಾ ವಿಚಾರವ ॥ ಅ ॥

ಎಚ್ಚರಿದ್ದು ಕಾಂಬುವ । ದಚ್ಚರಿಯಿದೆಂಬುವ ।
ಹುಚ್ಚ ಬಿಡಿಸಿಕೊಂಬುವ । ಹೆಚ್ಚಿನರಿವನೇ ಭವ ॥ ೧ ॥

ಕನಸೆಂದಿದೆಲ್ಲವ । ನೆನಸುತ್ತೆ ಸಲ್ಲುವ ।
ಬಿಸದದೆ ನಿಲ್ಲುವ । ಮನಸೊಂದನೇ ಭವ ॥ ೨ ॥

ಬರುನಿದ್ರೆಯೊಂದುವ । ಸರಸಿಪ್ಪ ಚಂದವ ।
ಮರಹಿಲ್ಲದ್ವೈವಿ ಶಂ । ಕರನಾಗುವಂದವ ॥ ೩ ॥

[ನಿರ್ದ್ವಯತಾವಿಚಾರ-ಪರಮಾತ್ಮನಿಗೆ ಎರಡನೆಯದಿಲ್ಲವೆಂಬ ವಿಚಾರ, ಬಿನದ-ವಿನೋದ, ಮರಹು-ಏನನ್ನೂ ತಿಳಿಯದ್ದು, ಶಂಕರ-ಶುದ್ಧಾತ್ಮ.]

---

**೨೭.** ಕಲ್ಯಾಣಿ, ಆದಿತಾಳ.

ಇದು ಉಪಕಾರವೋ ಅಪಕಾರವೋ ‖ ಪ ‖

ಸದಯನೊ ನಿರ್ದಯನೋ ನೀ, ನೀವಮಾಡಿರುವ | ದಿದು ‖ ಅ ‖

ಕರಣವೀರೈದು ನಿಸ್ಸುರುತರ ಸೇವೆಯು | ಸರಿದೆಸಗುವಪರಿ ಗುರು ಶಾಸ್ತ್ರಸಾವೆಯು ‖ **ಭರದ ಸಂಸೃತಿಯು ಶರಧಿಯೊಳಿರಿಸುತೆ । ಮರಹಿನ ದುರಿತಮುಕರಗಳ ತುರುಗಿ ಕೊರಗಿಪು । ದಿದು** ‖ ೧ ‖

ಎನ್ನೊಳ ಹೊಕ್ಕೆದೆಯನ್ನೆ ಮನೆಮಾಡುತೆ | ಕಣ್ಣಕಣ್ಣಾಹ ಚೈತನ್ಯದಿಂ ನೋಡುತೆ ‖ ಎಣ್ಣಲುಸುರಲಿಕೆ ತಿಣ್ಣವಾದ ಬಲು | ಸಣ್ಣರೂಪಿನಿಂ ಕಣ್ಮನವಿರಾರಿರುತಿರುವ | ದಿದು ‖ ೨ ‖

ಮಾನಸಾದಿಸಾಹ್ಯಮನೇಸುಪನೊಂದದೆ | ನೀನು ಸರ್ವಾತ್ಮನೆಂದೇ ನಂಬುವಂದದೆ ‖ ನಾನೆ ಬ್ರಹ್ಮವೆಂಬೀ ನುಡಿ ಕೇಳಿಸಿ | ಮೌನಿ ಶಂಕರನು ನೀನೆಂದೆನಿಸಿ ನಿರುಕಿಪು | ದಿದು ‖ ೩ ‖

[ಈರೈದು-ಹತ್ತು, ಶರಧಿ-ಸಮುದ್ರ, ತುರುಗಿ-ತುಂಬಿ, ಎದೆ-ಹೃದಯ, ಕಣ್ಣಕಣ್ಣು-ಕರಣಗಳಿಗೆಲ್ಲ ಚೈತನ್ಯ, ಎಣ್ಣಲು-ಯೋಚಿಸುವದಕ್ಕೆ, ಉಸುರಲಿಕೆ-ಹೇಳುವದಕ್ಕೆ, ತಿಣ್ಣ-ಕಷ್ಟ, ಸಾಹ್ಯ-ಸಹಾಯ, ಕೇಳಿಸಿ-ತಿಳಿಸಿ, ಮೌನಿಶಂಕರ-ಭಕ್ತರಿಗೆ ಸುಖವನ್ನುಂಟುಮಾಡುವವ.]

---

**೨೮.** ಮಧ್ಯಮಾವತಿ, ಆದಿತಾಳ.

ಶ್ರೀಪತಿಯೊಲವೊಂ।ದೇ ಪರಿಯಾಗಿರಲಿ ‖ ಪ ‖

ಆ ಪರಾತ್ಪರನಾ । ದಾ ಪುರುಷೋತ್ತಮ ‖ ಅ ‖

ಭ್ರಾಂತಿಯ ಜಗದಿ | ದಂತರಂಗವು ಕುಣಿ |
ವಂತಿರದಾ ಮಹಾ | ಶಾಂತಿದಾಂತಿಗಳೀವ ‖ ೧ ‖

[ತುರುಕರು-ಹಸುಕರು, ಮರಿಯೇಶನೆ-ಮೇರಿಜೀಸಸ್ ಕ್ರೈಸ್ತನೇ? ಎಣ್ಬರಿಜ-ಅಷ್ಟಮೂರ್ತಿಯನ್ನು, ಮೋದಕಾರ್ಥಿ-ಕಡುಬನ್ನು ಬಯಸುವ ಗಣಪತಿ, ಸಂಜ್ವರಮೂರು-ತಾಪತ್ರಯ, ಮುಂ-ಪೂರ್ವದಲ್ಲಿ, ಅಣುಪುಂಜ-ಪರಮಾಣುಗಳ ಸಮೂಹ.]

---

೩೦. **ದೇಶಿತೋಡಿ, ರೂಪಕ.**

ಅಡಿಯು ಕಾಣದೆ, ಅರಸಿ ಬಳಲಿದೆ । ಮುಡಿಯು ಕಾಣೆ ನೀ ಮರಹು ಗಡಲಿಗೆ ॥ ಪ ॥

ಕಡೆಯ ಹಾಯಿಸೀ ಕಲುಷವೆಲ್ಲವ । ತೊಡೆದು ಕರುಣವ ತೋರು ಶಂಕರ ॥ ಅ ॥

ಆಸೆಯೆನ್ನನು, ಐದು ವಿಷಯದ । ಬೀಸು ಬಲೆಯೊಳು, ಬಿಸುಟು ಬಡಿವುದ ॥ ಕಾಸಿ ಕರಗಿಸಿ, ಕೊರಗಿಸಿರ್ಪುದ । ನೇಸ ಪೇಳುವೆ, ನಿಮಗೆ ಶಂಕರ ॥ ೧ ॥

ಕರ್ಮಪಾಶದೆ, ಕಟ್ಟುಬಿದ್ದೆನು । ದೌರ್ಮನಸ್ಯದೆ ದುಷ್ಟನಾದೆನು ॥ ನಿರ್ಮಮತ್ವದಿಂ, ನಿಮ್ಮ ನೆನೆಯುವ । ಮರ್ಮವಾವುದೋ ಮರೆದೆ ಶಂಕರ ॥ ೨ ॥

ನಿನ್ನ ಭಕ್ತರ, ನಯುವ ತಿಳಿಯದೆ । ಕುನ್ನಿಯಂದದೆ ಕುಣಿದು ಕೊನೆಯುತೆ ॥ ನನ್ನಿಯರಿಯದೆ, ನಾಡ ತಿರುಗಿದೆ । ಮನ್ನಿಸೆಲ್ಲವ ಮಾನ್ಯ ಶಂಕರ ॥ ೩ ॥

ಶಮದಮಾದಿಯ ಶರಿರವಾವುದು ? । ಸಮತಾಯೋಗದ ಸಾರ ವಾವುದು ? ॥ ಸ್ತಿಮಿತವಿರತಿಯ ತೀರವಾವುದು ? । ಕ್ರಮವ ಕೇಳಿಸೈ ಕರುಣಿ ಶಂಕರ ॥ ೪ ॥

ದೇಶಕಾಲದ ದೂಸರಿಂದಲಿ । ಮೋಸಹೋದೆನ್ನೈ ಮೋಹಮುದ್ಗರ ॥ ದೇಶಿಕೇಂದ್ರನೇ ದಿಟವಸರುಹುತೆ । ದೋಷವೆಲ್ಲವ ದೂಡು ಶಂಕರ ॥ ೫ ॥

ಹೆಸರು ರೂಪವು ಹರಡಿದೀ ಜಗ । ನಿಸದ ವೆನ್ನುತೆ ನೀಡು ಮೆಣಿಸಿದೆ ॥ ಅಸಮನೇತ್ರ ನೀಸಖಿಲವೆಂತಿದ । ಬೆಸಸಬೇಹುದೈ ಬೇಗ ಶಂಕರ ॥ ೬ ॥

[ಮುಡಿ-ಕೊನೆ, ತೊಡೆದು-ಅಳಿಸಿಹಾಕಿ, ಕುನ್ನಿ-ನಾಯಿ, ನನ್ನಿ-ಸತ್ಯ, ದೂಸರಿಂದ-ಸಂಬಂಧದಿಂದ, ಮುದ್ಗರ-ಸುತ್ತಿಗೆ, ನಿಸದ-ನಿಜ, ಬೆಸಸಬೇಹುದೈ-ಹೇಳಬೇಕಯ್ಯ.]

---

೩೧. ಮುಖಾರಿ, ಆದಿತಾಳ.

ಗುರುವರ್ಯ ಪೊರೆಯೆನ್ನ। ಕರುಣದಿಂ ನೋಡಿ ॥ ಪ ॥
ಮರೆಯೆನ್ನ ಅಪರಾಧ । ಚರಣವ ಪಿಡಿವೆ ॥ ಅ ॥

ಎಲ್ಲಿಂದ ಬಂದುದೀ। ಇಲ್ಲದ ಮಾಯೆ।
ಸಲ್ಲದ ಕಾರ್ಯವ। ನೆಲ್ಲಗೈಸಿದುದು ॥ ೧ ॥

ನಿನ್ನ ಬೋಧೆಯ ಮೀರು। ತನ್ನವ ಭಜಿಸಿ।
ಕುನ್ನಿಯಾದೆನು ದೇವ । ಮನ್ನಿಸೀ ತಪ್ಪ ॥ ೨ ॥

ಮನೆಮಾರು ಧನವೆಂದು । ತನಯರಿವರೆಂದು ।
ಕನಸ ನಾ ನಿಜವೆಂದೆ । ನೆನೆಸಿದೆನಯ್ಯೋ! ॥ ೩ ॥

ನಿತ್ಯಾನಂದನು ನೀನು। ಮರ್ತ್ಯನಲ್ಲೆಂಬ।
ಸತ್ಯೋಪದೇಶವ। ನೊತ್ತರಿಸಿದೆನು ॥ ೪ ॥

ಪರಿಪರಿ ಬಳಲಿ ಸಂ। ಸರಣನಾರಕದಿ।
ಕೊರಗಿ ಬಂದಿಹೆನೈ ಶಂ। ಕರನೇ ಶರಣೆಂದು ॥ ೫ ॥

[ಮರ್ತ್ಯ-ಸಾವುಳ್ಳ ಮನುಷ್ಯ, ಒತ್ತರಿಸಿದೆನು-ಬದಿಗಿಟ್ಟೆನು, ಅಲಕ್ಷ್ಯಮಾಡಿದೆನು.]

---

೩೨. ಭೂಪಾಳಿ- ಝುಂಪೆ. [ಉದಯರಾಗದ ಧಾಟಿ.]

ಏಳಯ್ಯ ಬೆಳಗಾಯಿತು ॥ ಪ ॥

ಏಳು ಜೀವರ ಜೀವ । ಏಳು ದೇವರ ದೇವ । ಏಳುಲೋಕವ ಕಾವ ಸುಪ್ರಭಾವ ॥ ಅ ॥

ದೊರೆವೆತ್ತ ಕೋಟೆಯೆಂಟರ ಸುತ್ತಿನೊಂಬತ್ತು। ಮೆರೆವ ಬಾಗಿಲ ದುರ್ಗವೆಂದೆನಿಸಿಹ ॥ ಶರಿರಪುರದೊಳು ಹೃದಯದರಮನೆಯ ಮಂಚದಲಿ। ಭರದಿಂದೆ ತನಿನಿದ್ರೆಗೈದುದಾಯ್ತು ॥ ೧ ॥

ನಾನು ನನ್ನದಿದೆಂಬ ಹೀನೋಚ್ಚಭಾವಗಳ । ಮಾನಸದೆ ಕಲ್ಪಿಸುವ ಕನವರಿಕೆಯ ॥ ಮಾಣುತ್ತಲೆಚ್ಚತ್ತು ನೀನಿಜವ ನೋಡಿದು। ಮ್ಮಾನವನು ನೀಗಿ ನಲಿದಾಡು ದೇವ ॥ ೨ ॥

ಅಜನನಿದ್ರನು ನೀನು ನಿಜದಿನದ್ವೈತ ನೀ । ತ್ರಿಜಗವೆಂಬುದು ನಿನ್ನ ಮಾಯೆಯೆಂದು ॥ ಗಜಬಜಿಸುತಿರೆ ನಿಗಮಭಜಕರೆಲ್ಲರು ಹೊಗಳಿ। ತ್ಯಜಿಸಿ ಮರಹಿನ ಮುಸುಕನುಪ್ಪವಡಿಸಿ ॥ ೩ ॥

ವೇದವೆಂಬುವ ಹಕ್ಕಿಯಾದರದೊಳುಲಿಯುತಿರೆ । ಬಾದರಾಯಣನೆಂಬ ಕೋಳಿ ಕೂಗೆ ॥ ವಾದಿಗಳ ಶಂಖವಾದ್ಯ ನಾದವಾಗಲು ಕೇಳಿ । ಹೇ ದಯಾನಿಧಿ ಕಣ್ಣ ತೆರೆದು ಬೇಗ ॥ ೪ ॥

ಆದು ನೀನೆಯಹೆಯೆಂಬ ಸದಯ ಸದ್ಗುರು ಕರುಣ।ದೊದವಿನರುಣೋದಯವು ಪೂರ್ವದಲ್ಲಿ ॥ ಇದೆಕೊ ತೋರಿತು ತತ್ತ್ವವಿದರರವಿನೆಳನೇಸ । ರುದಿಸಿತ್ತು ನೆರೆ ನೋಡು ಶಂಕರೈಕ್ಯ ॥ ೫ ॥

[ದೊರೆವೆತ್ತ-ಪ್ರಸಿದ್ಧವಾದ, ಕೋಟೆ ಎಂಟು-ಚರ್ಮ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜ, ಶುಕ್ರ, ಓಜಸ್ಸು; ಒಂಬತ್ತು ಬಾಗಿಲು-ತಲೆಯಲ್ಲಿ ಏಳು, ಕೆಳಭಾಗದಲ್ಲಿ ಎರಡು, ತನಿನಿದ್ರೆ-ಕನಸ್ಸಿಲ್ಲದ ನಿದ್ರೆ, ದುಮ್ಮಾನ-ವ್ಯಸನ, ಉಪ್ಪವಡಿಸಿ-ಎದ್ದು, ಉಲಿ-ಶಬ್ದಮಾಡು, ಎಳನೇಸರು-ಬಾಲಸೂರ್ಯ.]

---

**೩೩.** ಶಂಕರಾಭರಣ ನೋಟು, ತ್ರಿಶ್ರ ಏಕತಾಳ.

ಬನ್ನಿ ಬನ್ನಿರೆಲ್ಲರು । ಬಿನ್ನಹವಿದ ಬಲ್ಲರು ॥ ಪ ॥

ಬನ್ನಿ ಬನ್ನಿ ಭವದ ಬೇಗೆ । ಯನ್ನು ತಾಳಲಾರದವರು ॥ ಅ ॥

ಹುಟ್ಟಿ ಹೊಂದಿ ಹುಟ್ಟಿ ಹೊಂದಿ । ಕೆಟ್ಟ ನಾಯಿ ನರಿಯು ಹಂದಿ ।
ಹೊಟ್ಟೆಗಾಗಿ ಸುತ್ತುವಂತೆ । ಕೆಟ್ಟು ತಿರುಗಲೊಲ್ಲದವರು ॥ ೧ ॥

ಸೋಮಯಾಗವನ್ನು ದುಡಿದು । ಸೋಮಲೋಕವನ್ನು ಪಡೆದು ।
ಭೂಮಿಗಿಳಿದು ಮತ್ತೆ ನಿಮುಮ।ದಾಮುಡೆಳೆತಕೆಳಸದವರು ॥ ೨ ॥

ದೇವಯಾನದಿಂದ ಬ್ರಹ್ಮ । ದೇವಲೋಕದಲ್ಲಿ ತಮ್ಮ ।
ತಾವ ಸೇರಿ ಸೊಗವನಟಿವ । ಬೇವಸಪಸು ಜೇಡದವರು ॥ ೩ ॥

ಕಸ್ನಡಿಯೊಳು ತೋರ್ಪ ಗಂಟು । ತನ್ನದೆಂಬುದೆಲ್ಲಿಯುಂಟು? ।
ಕುಸ್ನಿಯಂತೆ ಭಾವನೆಗಳ । ನಿಸ್ನು ಮಾಡೆವೆಸ್ನುವವರು ॥ ೪ ॥

ನಿತ್ಯಶುದ್ಧಬುದ್ಧಮುಕ್ತ । ಸತ್ಯರೂಪ ತರ್ಕಯುಕ್ತ ।
ಸತ್ಯವೇದಾಂತಶಂಕ । ರೋಕ್ತಿಯಿಂದ ಭಜಿಸುವವರು ॥ ೫ ॥

[ಹೊಂದಿ-ಸತ್ತು. ಸೋಮಲೋಕ-ಪಿತೃಲೋಕ, ಬೇವಸ-ಬೇಸರ, ಸತ್ಯರೂಪ-ಸತ್ಯವಾದ ರೂಪವನ್ನು. ವೇದಾಂತಶಂಕರೋಕ್ತಿ-ಉಪನಿಷತ್ತುಗಳ ಸುಖಕರವಾದ ನುಡಿ.]

---

೩೪. ಹಿಂದೂಸ್ಥಾನಿ ಕಾಪಿ, ಆದಿತಾಳ.

ಕೆಡದಿರಿ ಬರಿದೇ । ಜಡಮತಿಗಳಿರಾ ॥ ಪ ॥
ಪಡದಿರಿ ಕಷ್ಟವಂ । ತಡಿಗಡಿಗೆ ॥ ಅ ॥

ದೇಹವೆ ನೀವೆಂದೂಹಿಸಿ ಸುಮ್ಮನೆ । ಹಾಹೆಗಳಂದದಿ ಕುಣಿಯುತಿಹ । ಮೋಹವ ನೀಗುವ ಸೋಹಂಜ್ಞಾನವ । ತಾಹ ವಿಚಾರಕೆ ಮನಗೊಡದೆ ॥ ೧ ॥

ಜಗವಿದು ಕನಸಿನ ಬಗೆಯೆನದಿಲ್ಲಿಯು । ಸೊಗವನೆ ನೆಚ್ಚುತ ಬಿಗುವಡೆವ । ಮುಗುಧತೆಯಡಗುವ ಸೊಗಸಿನ ಸೂರೆಯು । ಮಿಗಿಲಹ ಬೋಧವ ಬರಗೊಡದೆ ॥ ೨ ॥

ಮೂರು ಗುಣಂಗಳ ತೋರುವ ಮಾಯಾಸಂ । ಸಾರದ ಬಲೆಯೊಳು ಬೀಳಿಸುವ ॥ ಕಾರಣಾವಿದ್ಯೆಯ ಮಿಾರದ ಶಂಕರ । ಚಾರುಚರಣದೆಡೆ ಪೊಡೆಮಡದೆ ॥ ೩ ॥

[ಹಾಹೆ-ಬೊಂಬೆ. ತಾಹ-ತರುವ, ಸೊಗ-ಸುಖ, ಬಿಗುವಡೆವ-ಬದ್ಧರಾಗುವ, ಕಾರಣಾವಿದ್ಯೆ-ಸಂಸಾರಕ್ಕೆ ಮೂಲವಾದ ಆತ್ಮಾಜ್ಞಾನ, ಪೊಡೆಮಡದೆ-ನಮುಸ್ಕರಿಸದೆ.]

---

**೩೫. ಆರಭಿ, ಆದಿತಾಳ.**

ಮುಕ್ತಿಪಥದ ಕುರುಹ ಪೇಳ್ವೆ ಕೇಳಿರಯ್ಯ ॥ ಪ ॥
ಶ್ರುತಿ | ಯುಕ್ತಿ ಸ್ವಾನುಭವದೆ ಕಂಡು ಬಾಳಿರಯ್ಯ ॥ ಅ ॥

ಕಾಮ ಕರ್ಮಪಾಶದೆಳೆತ ಕಾಣದಯ್ಯ | ಅಲ್ಲಿ | ನೇಮನಿಷ್ಠೆ
ಶಾಂತಿದಾಂತಿ ಮಾಣದಯ್ಯ ॥ ತಾಮಸರಾಜಸವಳಿದ ತಾಣವಯ್ಯ |
ನಿಜ | ಧಾಮದೊಳೇ ಲಕ್ಷ್ಯವಿಟ್ಟ ಕೇಣವಯ್ಯ ॥ ೧ ॥

ನಾನು ನನ್ನದೆಂಬುದೇನೂ ಇಲ್ಲವಯ್ಯ | ಅಲ್ಲಿ | ಹೀನವುಚ್ಚ
ವೆಂಬುದೇನೂ ಸಲ್ಲದಯ್ಯ ॥ ಮಾನಮೇಯ ಭಾವವಿಲ್ಲದೆಲ್ಲವಯ್ಯ | ತನ್ನ |
ಭಾಸವಾಗಿ ತೋರುತಿರ್ಪಗೆಲ್ಲವಯ್ಯ ॥ ೨ ॥

ಮರವೆ ಹೊದ್ದದಿರುವ ಸೈಪಿನಿರವದಯ್ಯ | ಅಲ್ಲಿ | ಗುರುವು
ಶಿಷ್ಯನೆಂಬ ಭೇದ ಸರಿವುದಯ್ಯ ॥ ಅರಿವುಮರವೆಗಳಿಲ್ಲದರಿವ ತೆರನ
ದಯ್ಯ | ಗುರು ಶಂ | ಕರನ ನಂಬಿ ಸೊಗದೊಳಾಳ್ವ ಭರವದಯ್ಯ ॥ ೩ ॥

**[ಮಾಣದು-ಬಿಡುವದಿಲ್ಲ, ಕೇಣ-ಮತ್ಸರ, ಹಟ; ಮಾನಮೇಯಭಾವವಿಲ್ಲದೆ-ಇದು ಪ್ರಮಾಣ ಇದನ್ನು ಅರಿಯತಕ್ಕದ್ದು ಎಂಬ ಭೇದವಿಲ್ಲದೆ, ಗೆಲ್ಲ-ಜಯ, ಹೊದ್ದದೆ-ಸೇರದೆ, ಸೈಪು-ಪುಣ್ಯ, ಆಳ್ವ-ಮುಳುಗುವ.]**

---

**೩೬. ಮಾಯಾಮಾಳವಗೌಳ, ಅಟತಾಳ.**

ನಿಮ್ಮಲ್ಲಿಯೆ ಕಾಣಿರೊ ಶಿವನ | ಮತ್ತ | ಲ್ಲಲ್ಲಿ ಅರಸಲೇಕವನ ॥ ಪ ॥
ಇಲ್ಲಿಯೆ ಇರುತ ಜಗವೆಲ್ಲವ ತುಂಬಿ ತಾ | ನಿಲ್ಲವೆನ್ನುವ ಹುಸಿಸೊಲ್ಲ
ನಗುವನ ॥ ಅ ॥

ಎಚ್ಚರ ಕನಸುಗಳೆಂಬ | ಎರಡು ಬಗೆ | ಬಿಚ್ಚಿದ ವಿಷಯದ
ತುಂಬ | ಸೇರುತ ತನ್ನ | ಹೆಚ್ಚಿನರಿವಿನಿಂದಲುಂಬ ॥ ಮುಚ್ಚುಮರೆಯ
ದೇನುಚ್ಚನೀಚ ಭೋಗ | ನಿಚ್ಚವುಣ್ಣುತಲತಿಸ್ವಚ್ಛವಾಗಿಹನ ॥ ೧ ॥

ಕನಸನೆಚ್ಚರವೆಂದು ಕಾಂಬ | ಮತ್ತರಿದೆದ್ದು | ಕನಸಿದೆಚ್ಚರ
ವಲ್ಲವೆಂಬ | ಕಾಣುವದೆಲ್ಲ | ಕನಸಲ್ಲದಿರೆ ಮತ್ತೇನೆಂಬ ॥ ಕನಸಿನ
ಕಾರ್ಯಕಾರಣ ಸಂಸಾರವ | ನೆನಸಿ ನಗುವ ಚಿದ್ಘನರೂಪನ ॥ ೨ ॥

ಮಾಯೆಯ ಜಗವೆಲ್ಲ ಕಳೆದು | ನಿದ್ರೆಯೊಳು ನಿ | ರ್ಮಾಯ ರೂಪವನೆ ತಾ ತಳೆದು | ಕಾಯಕ್ಲೇಶ | ದಾಯಸವೆಲ್ಲವ ನುಳಿದು || ಬೀಯವಿಲ್ಲದದ್ವಿತೀಯದೃಷ್ಟಿಯುಳಪ್ರ | ಮೇಯನೆನಿಪ ಸಾಮಗೇಯ ಶಂಕರನ || ೩ ||

[ಹುಸಿ ಸೊಲ್ಲ-ಸುಳ್ಳುಮಾತನ್ನು ಕೇಳಿ, ಹೆಚ್ಚಿನರಿವಿನಿಂದ-ಉತ್ತಮಚೈತನ್ಯ ಸ್ವರೂಪದಿಂದ, ಚಿದ್ಘನ-ಬರಿಯ ಚೈತನ್ಯದ ಗಟ್ಟಿ, ಬೀಯವಿಲ್ಲದ-ನಾಶವಿಲ್ಲದ, ಅಪ್ರಮೇಯ-ಪ್ರಮಾಣಕ್ಕೆ ನಿಲುಕದ.]

---

೩೭. ಖಮಾಚ್, ಆದಿತಾಳ.

ಭಜ ನಿರಾಕಾರಕರ್ತಾರಮ್ | ಭಜ ನಿಖಿಲಾಕಾರಮುದಾರಮ್ || ಪ ||

ಸತ್ಯಜ್ಞಾನಸುಖಾಮೃತಸಾರಮ್ |
ಸಕಲಭೂತಭರ್ತಾರಮ್ | ಭಜ || ೧ ||

ನಾಮರೂಪಯೋರ್ವ್ಯಾಕರ್ತಾರಮ್ |
ನಿಜಮಹಿಮೈಕಾಧಾರಮ್ | ಭಜ || ೨ ||

ಸೃಷ್ಟಿಸ್ಥಿತಿಲಯಸಂಧಾತಾರಮ್ |
ಸಕಲಕಾಮಸುವಿದೂರಮ್ | ಭಜ || ೩ ||

ಪ್ರಕೃತಿದ್ವಯಚಿತಸಗುಣಾಕಾರಮ್ |
ಪ್ರೇಮಮೂರ್ತಿಮವಿತಾರಮ್ | ಭಜ || ೪ ||

ಶ್ರುತಿಮಸ್ತಕಬೋಧಿತಸಂಚಾರಮ್ |
ಶಙ್ಕರಪದದಾತಾರಮ್ | ಭಜ || ೫ ||

[ಪ್ರಕೃತಿದ್ವಯ--ಪರಾಪರಪ್ರಕೃತಿಗಳು, ಅವಿತಾರಮ್--ಕಾಪಾಡುವ, ಶ್ರುತಿಮಸ್ತಕ-ಉಪನಿಷತ್ತು, ಶಙ್ಕರಪದ-ಕೈವಲ್ಯ.]

---

೩೮. ಜುಂಝೋಟಿ, ಆದಿತಾಳ.

ಯೋಗವ ಪೇಳುವೆ ಕೇಳಿ | ಶುಭಕರ || ಪ ||

ಯೋಗವಿದರಿಂ ಸುಪಯೋಗವನರಿತು ಕು ।
ಯೋಗವ ಬಿಸುಡುತ ಬಾಳಿ । ಶುಭಕರ ॥ ಅ ॥

ದೇಹೇನ್ದ್ರಿಯದ ಸಮೂಹವು ಕನಸಿನ ।
ಕಾಹುರವೆಂದರಿತೇಳಿ । ಶುಭಕರ ॥ ೧ ॥

ಒಳಗೆ ಹೊರಗೆ ಎಂಬಳಿವೆಸಕದ ಮುಸ ।
ಹೊಳೆಯುದ ನೋಟವ ತಾಳಿ । ಶುಭಕರ ॥ ೨ ॥

ಸೋಂಕದೇಸುವಸು ಶಂಕೆಯು ಕಾಣದ ।
ಶಂಕರಯೋಗದೊಳಾಳಿ । ಶುಭಕರ ॥ ೩ ॥

[ಯೋಗವಿದರಿಂ-ಯೋಗವನ್ನು ಬಲ್ಲವರಿಂದ, ಕುಯೋಗ-ಕೆಟ್ಟವ್ವರ ಸಂಬಂಧ, ಕಾಹುರ-ಪ್ರವಾಹ, ಅಳಿವೆಸಕ-ಮಾಯೆಯನ್ನು ಕಲ್ಪಿಸುವ, ಸೋಂಕದೆ-ಮುಟ್ಟದೆ.]

---

೩೯. ಮುಖಾರಿ, ಆದಿತಾಳ.

ಜಿದ್ಗಗನದೆ ಚಿತ್ತದ ನಡೆಮಾಡವು ಚಲಿಸುತಲಿದೆ ನೋಡಿ ॥ ಪ ॥
ಸದ್ಗತಿವಡೆವರು ಸಮಯುವರಿತು ಶುಭಸಾಧನೆಯೊಡಗೂಡಿ ॥ ಅ ॥

ಅಡಿಗಡಿಗೆ ವಿವೇಕವನಭ್ಯಾಸಿಸಿ। ಕಡು ವೈರಾಗ್ಯದೊಳು ॥ ತಡೆದು
ಹೊರಗೆ ಹರಿದಾಡಗೊಡದೆ ಒಳ । ನಡೆಯಿರಿ ವೇಗದೊಳು ॥ ೧ ॥

ವೈಗರೆಯುವದೊಂದೇ ಗಳಿಗೆಯೊಳಿದು । ಬೇಗನೆ ಸೀವೇಳಿ ॥
ಈಗಲುಗಾಡಿತು ಹೋಗುವದಿದು ಸಮ । ನಾಗಿ ಎಳೆದುಕೊಳ್ಳಿ ॥ ೨ ॥

ಹಿಂಡಕೆ ಮುಂದಕೆ ಬಿಡದಂತೆರಡೂ । ಸಂದಿಗೆ ಕೀಲಿಡಿರಿ ॥
ನಿಂದಿರುತಿರೆಯಾನಂದದೆ ಹಿಗ್ಗದೆ । ಹೊಂದಿಸಿ ಹಿಡಿದಿಡಿರಿ ॥ ೩ ॥

ಎಚ್ಚರದಲಿ ಕುಳ್ಳಿರಿ ನಡೆಮಾಡದೆ । ಬಿಚ್ಚಿಕೊಳ್ಳದಂತೆ ॥
ಒಚ್ಚತವಾಗಿಯೆ ನಿಶ್ಚಲವಾಗಲು । ಸಚ್ಚಿತ್ಸುಖ ಮುಂತೆ ॥ ೪ ॥

ಲಯುವಿಕ್ಷೇಪಕಷಾಯರಸೇಚ್ಛೆಯು। ನಯದೆ ಬಿಡಿಸಿಕೊಂಡು ।
ಜಯಶಂಕರಪದವಿಯೊಳೇ ನಲಿಯಿರಿ। ಭಯವಿರದಿದ ಕಂಡು ॥ ೫ ॥

[ನಡೆಮೂಢ-ವಿಮೂಢ, ಸದ್ಗತಿ-ಬ್ರಹ್ಮಸ್ಥಿತಿ, ಹಿಂದಕೆಮುಂದಕೆ-ಲಯವಿಕ್ಷೇಪಗಳಿಗೆ, ನಿಂದಿರುತಿರೆ-ಕಷಾಯಯುಕ್ತವಾಗಿದ್ದರೆ, ರಸೇಚ್ಛೆ-ಏಕಾಗ್ರತೆಯ ಆನಂದದಲ್ಲಿ ಬಯಕೆ.]

---

**೪೦.** **ತೋಡಿ, ರೂಪಕ.**

ಭಜನೆ ಮಾಡಿರೋ । ಸುಜನರೆಲ್ಲ ॥ ಪ ॥

ಅಜಹರೀಂದ್ರಮುಖವಿನಮಿತ।ರಜತಗಿರಿಶನಡಿಗಳನ್ನು ॥ ಅ ॥

ವಿಶ್ವವೈಶ್ವಾನರರಿಗೆ । ಶಾಶ್ವತೈಕ್ಯವೊಂದಿ ಬೆಳಗೆ ।
ವಿಶ್ವವೆಲ್ಲ ನಿಜದಿನಾ ಜಗ।ದೀಶ್ವರನೆಂಬ ಶ್ರುತಿಯ ನಂಬಿ ॥ ೧ ॥

ತೈಜಸ ಹಿರಣ್ಯಗರ್ಭ।ಮಾಜದೊಂದೆಯಾಗಿ ತೋರೆ ।
ಈ ಜಗವೆಲ್ಲ ಮಾನಸವೆಂ।ದೋಜೆಯಿಂದ ನಿರುತ ನಂಬಿ ॥ ೨ ॥

ಪ್ರಾಜ್ಞನಂತರ್ಯಾಮಿ ಇವರು।ವಿಜ್ಞದೃಷ್ಟಿಗೊಂದೆಯಾಗೆ ।
ಅಜ್ಞಾತಾತ್ಮನೀಜಗತ್ಕಾರಣ।ಸಂಜ್ಞನಾಹನೆಂದು ನಂಬಿ ॥ ೩ ॥

ಕಾರ್ಯಕಾರಣಾತ್ಮರು ಮಾಯಾ।ಕಾರ್ಯರಹರು ನಿಜದಿ ನೋಡೆ ।
ಕಾರ್ಯಕಾರಣವರ್ಜಿತನಾದ।ತುರ್ಯಶಿವನ ಬಿಡದೆ ನಂಬಿ ॥ ೪ ॥

ಪೂರ್ವಪೂರ್ವದವಿಪ್ರ ಮುಂದನು।ಸೇರ್ವ ಬಗೆಯಿಂಲಯವಗೈಯುವ।
ಅ । ಪೂರ್ವಶ್ರೌತದೃಷ್ಟಿಶಂಕರ । ಗುರ್ವನುಗ್ರಹವೆಂದೆ ನಂಬಿ ॥ ೫ ॥

---

**೪೧.** ಬಿಲಹರಿ, ಅಟತಾಳ. [‘ಕರುಣದಿ ಕಾಯೊ ಗೋಪಾಲ’]

ಏನಾದುದೊ ಕಾಣೆ ಜನಕೆ ॥ ಪ ॥

ಬ್ರಹ್ಮಜ್ಞಾನಪೇತಕೆ ಸೇರದಾದುದೊ ಮನಕೆ ॥ ಅ ॥

ಕೊಳಿಮುಯ್ಯ ತಾನೆಂಬರಲ್ಲ । ಅರೆ । ಗಳಿಗೆಯೊಳಿದು ಬಿದ್ದು
ಹೋಗುವದಲ್ಲ ॥ ಅಳಿವಿಲ್ಲ ಪರಿಶುದ್ಧರೆಲ್ಲ । ಇದ । ತಿಳಿದು ತಿಳಿದು
ಮೋಹಕೆರಗುವರಲ್ಲ ॥ ೧ ॥

ಕರಣ ಪ್ರಾಣವು ಮನವೆಲ್ಲ । ಬರಿ । ಯರಿವಿಲಿ ತೋರುವ ಮಾಯೆ ಮತ್ತಿಲ್ಲ ॥ ಬರುನಿದ್ರೆಯಲಿ ಬ್ರಹ್ಮವೆಲ್ಲ । ರಾತ್ರಿ । ಯರಿತ ಭಾವಿಗೆ ಹಗಲೇ ಜೀಳ್ವರಲ್ಲ ॥ ೨ ॥

ತಾನು ತನ್ನದಿದೆಂಬ ಸಲ್ಲ।ದಘಿ।ಮಾನವೊಂದಕೆ ಸಿಕ್ಕಿ ಸೊರಗುವ ರಲ್ಲ ॥ ಆ ನಿಗಮಾಂತದ ಸೊಲ್ಲ । ಕಡೆ । ಗಾಣುವರೇಕೊ ಶಂಕರನೋರ್ವ ಬಲ್ಲ ॥ ೩ ॥

[ಕೊಳೆಮೆಯ್ಯ-ಅಶುಚಿಯಾದ ದೇಹವನ್ನು, ಬರಿಯರಿವಿಲಿ-ನಿರ್ವಿಶೇಷವಾದ ಚೈತನ್ಯದಲ್ಲಿ, ನಿಗಮಾಂತದ ಸೊಲ್ಲ-ವೇದಾಂತವಚನವನ್ನು, ಕಡೆಗಾಣುವರು-ಅಸಡ್ಡೆ ಮಾಡುತ್ತಾರೆ.]

---

**೪೨.** **ಆನಂದಭೈರವಿ, ಏಕತಾಳ.**

ಮರೆಯದಿರೋ ಮಾನವನೆ ॥ ಪ ॥
ಮರಣವಿದೂರನು ನೀನೇ ॥ ಅ ॥

ಬಾಲ್ಯವು ಯೌವನ ಜರೆಯು । ಸ್ಥೂಲಶರೀರದೊಳಿರೆಯು ।
ಕಾಲವ ಮೀರಿರುವನು ನೀ । ಕಾಲಗೆ ಕಾಲನು ಎಂದೆಂಬುದ ॥ ೧ ॥

ಎಚ್ಚರ ನಿದ್ರೆಯು ಕನಸು । ಸಿಚ್ಚವು ಮಾನಸಕಿನಿಸು ।
ಸ್ವಚ್ಛನಲೇ ತುರ್ಯನು ನೀ । ನಿಶ್ಚಲನೋರ್ವನೆ ಎಂದೆಂಬುದ ॥ ೨ ॥

ಜನುಮವಿಕಾರದ ದುಃಖ । ತನುವಿಗೆ ಸೇರಿತು ಲೆಕ್ಕ ।
ಚಿನುಮಯ ಶಂಕರಗುರು ನೀ । ಮುನಿಗಣಸೇವ್ಯನೆ ಎಂದೆಂಬುದ ॥ ೩ ॥

[ಜರೆ-ಮುಪ್ಪು, ಇನಿಸು-ಇಷ್ಟು, ಓರ್ವನೆ-ಅದ್ವಿತೀಯ.]

---

**೪೩.** **ತೋಡಿ, ಅಟತಾಳ.** [‘ದಾಸನೆಂದೆನಿಸೊ ಎನ್ನ’]

ಇಂದೆ ಧೀಗಂಗೆಯೊಳು । ಮಿಂದು ಮಡಿಯಾಗಿರೊ ॥ ಪ ॥

ಕುಂದುಕೊರತೆಯುಳಿದಾ । **ಬಳಿದಾ । ನಂದದಲಿ ಮುಳುಗಿರೊ** ॥ ಅ ॥

ದೇಹದ ಪ್ರಾಣದ । ಮೋಹವ ಮಾಣದ ॥ ಜೋಹವಿದೆಚ್ಚರು ತಾಣದ । **ಮೋಹಚಿತಗುಣವೆಂ । ದಿಂದೆ** ॥ ೧ ॥

ಮನಸಿನ ಬಹುಕಾರ್ಯ | ಕನಸಿನೊಳಾಶ್ಚರ್ಯ || ಘನತರ
ನಿದ್ರೆಯೊಳ್ ಮರೆಯಾ | ದನಿತರಿಂ ತುರಿಯ | ತನಗಿಲ್ಲವವತೆ
ಯೆಂದಿಂದೆ || ೨ ||

ಅರಿವುದು ಮರೆವುದು | ತುರಿಯನೊಳ್ ಬೆರೆಯದು || ಅರಿಯ
ಲಹತೆಯೊಳ್ ಪಿರಿದು | ಮರೆವುದೆಂದರಿದು | ಶಂಕರನ ಸೇರುತ !
ಲಿಂದೆ || ೩ ||

[ ಬಳಿದ-ಎಲ್ಲಕ್ಕೂ ಹೆಚ್ಚಿನದಾದ, ಜೋಹ-ವೇಷ, ಶರೀರ; ಮೋಹಚಿತ-ಅಜ್ಞಾ
ನದಿಂದಾದ, ಗುಣ-ತಮೋಗುಣ, ಅವತೆ-ಅವಸ್ಥೆ. ]

---

**೪೪.** ಮೋಹನ, ಆದಿತಾಳ. [ ‘ ನಾನೇನ ಮಾಡಿದೆನೊ ರಂಗಯ್ಯ ’ ]

ಇಲ್ಲದವಿದ್ಯೆಯಿದು | ಜಗದೊಳ | ಗೆಲ್ಲರ ಬಾಧಿಪುದು || ಪ ||

ಇಲ್ಲದವಿದ್ಯೆಯನುಳ್ಳುದ ಮಾಡುತ | ಬೆಲ್ಲವ ಕಹಿಯೆಂದೊಲ್ಲದೆ
ಕೊರಗುವ | ರಿಲ್ಲದ || ಅ ||

ಕನಸಿದೆಚ್ಚರೆಂಬ | ಭೇದವನೇ | ತನಗಿದಿರೊಳು ಕಾಂಬ ||
ಇನಿಸತಿಶಯವಿರದನುಪಾಧಿಕದರಿ | ವಿನಲಿರುವೆನಗೇ ಘನತರತಮವೆಂ |
ಬಿಲ್ಲದ || ೧ ||

ಎಲ್ಲೆಲ್ಲಿಯುಮಿರದು | ಮರಹು ತ | ನ್ನಲ್ಲಿ ತೋರ್ಪುದರಿದು ||
ಬಲ್ಲರ ಬಲ್ಲಹ ತಾನಹೆ ದಿಟದಿಂ | ದೆಲ್ಲಾ ಕಡೆಯೊಳು ಹೊಲ್ಲೆಹವೇ
ಪಿಹು | ದಿಲ್ಲದ || ೨ ||

ನೋಡುವ ನಾನಲ್ಲ | ನನ್ನಳಿದಿದ | ನೋಡುವ ಪೆರನಿಲ್ಲ ||
ನೋಡದ ಮೊಲಕಿಹ ಕೋಡಿದು ಶಂಕರ | ನಾಡಿದ ಗಾಥೋಕ್ತಿಯು
ಸಟೆಯಲ್ಲ || ೩ ||

[ ಉಳ್ಳುದ ಮಾಡುತ- ಹುಟ್ಟುಗಟ್ಟಿಕೊಂಡು, ಇನಿಸು-ಸ್ವಲ್ಪವೂ, ಅನುಪಾಧಿ
ಕದರಿವಿಲಿ-ಮತ್ತೊಂದರ ಸಂಬಂಧವಿಲ್ಲದ ಚೈತನ್ಯದಲ್ಲಿ, ಬಲ್ಲರ ಬಲ್ಲಹ-ಚೇತನರ
ಚೇತನ, ಹೊಲ್ಲೆಹ-ಸುಳ್ಳು ]

---

**೪೫.** ದ್ವಿಜಾವಂತಿ, ಆದಿತಾಳ. [‘ನೀನೇನೇ ರಾವಣನೆಂಬಾತನು’]

ನೀನೇ ಬ್ರಹ್ಮ ನಿದಾನಿಸಿ ನೋಡೆಲೊ । ಮಾನವ ಯುಕ್ತಿಯುಳಿ ॥
ಸ್ವಾನುಭವಕೆ ಶ್ರುತಿಸಾರವ ಹೊಂದಿಸು । ತಾನಂದಾಮೃತಪಾನವ
ಗೈಯಲು ॥ ಪ ॥

ನಿನ್ನೊಳು ಮಾನಸಭಿನ್ನವೃತ್ತಿ ಸಂ । ಭಿನ್ನವಾಗಿ ಜಗವು ॥
ಚೆನ್ನಿಸೆದೊಡದೇಂ ಸನ್ನಿಯುಹುದೆ ? ಮನ । ದುನ್ಮನೀಭಾವದೊಳಿನ್ನು
ಲಯಿಸಲದ ॥ ೧ ॥

ದೇಶಕಾಲಪರಿಭಾಷಿತಜಗವಿದ । ಶೇಷವು ಬರಿಗನಸು ।
ಭಾಸವಿಲ್ಲ ನಿನ್ನಾಸುಪ್ತಿಯೊಳಿದು । ನೀ ಸುಖರೂಪಸರ್ವೇಶನೋ
ರ್ವನಿಹೆ ॥ ೨ ॥

ಮರಹರಿವಿನ ಪರಿಯರಿಯದ ಪರಮ ಸಂ । ಸರಣಶೂನ್ಯ ನೀನು ॥
ಗುರುಗಳ ಗುರು ಶಂಕರ ನಿರ್ದ್ವಂದ್ವನು । ದೊರೆವಡೆದಿಹೆ ನಿನ್ನರಿಕೆಯ
ಮೈಮೆಯೊಳ್ ॥ ೩ ॥

[ಸಂಭಿನ್ನವಾಗಿ-ಸೇರಿಕೊಂಡು, ಚೆನ್ನಿಸೆದೊಡದೇಂ-ಸ್ಫುಟವಾಗಿ ಕಂಡಮಾತ್ರಕ್ಕೆ ಏನು ? ಉನ್ಮನೀಭಾವ-ಮನಸ್ಸು ಮನಸ್ಸಲ್ಲದ ಸ್ಥಿತಿ, ದೇಶಕಾಲಪರಿಭಾಷಿತಜಗ-ಅಲ್ಲಿ ಇಲ್ಲಿ, ಈಗ ಆಗ, ಇದು ಅದು ಎಂಬ ವ್ಯವಹಾರದಿಂದ ತೋರುವ ಜಗತ್ತು; ಅರಿಕೆಯ-ಪ್ರಸಿದ್ಧವಾದ. ]

---

**೪೬.** ಹಿಂದುಸ್ಥಾನಿ ಕಾಪಿ, ರೂಪಕ.

ಕಾಲನಾಟವ । ನೋಡಿರಿಂದು । ಜಾಲಕೂಟವ ॥ ಪ ॥

ಕಾಲನಾಟವ ನೋಡಿ ತಿಳಿಯೆ । ಕಾಲಕಾಲನಹರಾಕ್ಷ್ಣದಿ ॥ ಅ ॥

ಹಗಲುರಾತ್ರಿ ಪಕ್ಷತಿಂ । ಗಳುಗಳು ಋತುಗಳಯನ ವರುಷ ॥
ಮಗುಳೆಮಗುಳೆತೋರೆ ತಿರುಗುತ । ತಿಗುರಿಯಂದವತಾಳುತಿರ್ಪ ॥ ೧ ॥

ಆದಿಯಂತವೆರಡು ತೋರ । ದಾದ ರೂಪಿನಿಂದ ಜನರ ॥
ಬಾಧಿಸುತ್ತೆ ಕಾರ್ಯಕಾರಣ । ಭೇದಸ್ಥಿತಿಗೆ ಬೇರೆಂದೆನಿಸಿಹ ॥ ೨ ॥

ಮನಸಿನಿಂದಲೊಗೆದು ಬಹಳ। ಕನಸುಗಳನು ಕಾರಿ ಕಡೆಗೆ ॥
ಘನಸಮಾಧಿಸುಪ್ತಿಯಿಂದ। ಮನವ ಶಂಕರನಲ್ಲಿ ಕರಗಿಪ ।೩॥

[ ಇಂದ್ರಜಾಲಕೂಟ-ಕಣ್ಣುಕಟ್ಟಿನಿಂದಾಗಿರುವ ರೂಪು, ಮುಗುಳೆ-ಮತ್ತೆ, ಬೇರು-ಕಾರಣ. ]

---

**೪೭.** **ಪಂತವರಾಳಿ, ಆದಿತಾಳ.**

ಸಾವಿಲ್ಲವೊ ಜೀವ। ನಿನಗೆಂದಿಗು ॥ ಪ ॥

ಸಾವಿಲ್ಲವು ಪರಿಭಾವಿಸೆ ಜಗವೇ। ಸಾವ ಹುಟ್ಟುತಿಹ ತಾವೈಸಲೆ ನೀ ॥ ಅ ॥

ಗಡಿಗೆಯು ದೂಸರಿಂದ ಬಯಲು ಬೇ। ಪಡುತಡಗುವ ಚಂದ ॥
ಅಡಿಗಡಿಗಾನುತೆ ಜಡದೇಹಂಗಳ। ಮುಡಿವವೊಲಿದೊರ್ಡೇಂ ಬಿಡು ಪುಸಿದುಗುಡವ ॥ ೧ ॥

ಕನಸು ಮಾಯೆಯೊಳಗೆ। ದೇಹಂಗಳು। ನೆನೆಸಿಕೊಂಡ ಘಳಿಗೆ ॥
ಎನಿಸೊ ತೋರುತಲಿ ಕೊನೆಗಾಣುವ ಪರಿ। ತನುವಿದು ಬರಿದೇ ಮೊನೆದು ಮೈಗರೆವುದು ॥ ೨ ॥

ತನಿನಿದ್ರೆಯು ಸೊಗದೆ। ನೀನನುದಿನ। ತನುವಿನೊಳಗೆ ಸಿಗದೆ ॥
ಚಿನುಮಯುನಹೆ ನೀನನಘಶಂಕರನೈ। ಜನಿಮೃತಿಸಾಕ್ಷಿಯೆಂದನುಭವ ಸಿದ್ಧವು ॥ ೩ ॥

[ತಾವು-ಸ್ಥಾನ, ಆಶ್ರಯ; ಅಡಗುವ ಚಂದ-ನಾಶವಾಗುವಂತೆ, ಆನುತೆ-ಹೊಂದುತ್ತ, ದುಗುಡ-ದುಃಖ, ಎನಿಸೊ-ಎಷ್ಟೊ, ಮೊನೆದು-ಚಿಗುರಿ, ಹುಟ್ಟಿ; ಮೈಗರೆವುದು-ಲಯವಾಗುತ್ತದೆ. ತನುವಿನೊಳಗೆ ಸಿಗದೆ-ಶರೀರದ ಕಟ್ಟನ್ನು ಮೀರಿ.]

---

**೪೮.** **ಖರಹರಪ್ರಿಯ ಅಟತಾಳ.**

ಆತುಮನೋರ್ವನೆ ನರಿಕಾಣಿರೊ । ಪ ॥

ಬೇ। ವಾತುಮನೇ ಪರಮನು ಕಾಣಿರೊ ॥ ಅ ॥

ಗಡಿಗೆಮಡಕೆಕುಡಿಕೆಗಳೆಂಬುವ | ಪೆಸರುಗಳ । ಬಿಡಿಬಿಡಿಯಾಗಿ ಬಯಲೆ ಕೊಂಬುವ ‖ ಪಡಿಯೊಳಗಾತುಮ ನೊಡಲಿಸುಪಾಧಿಯಿಂ | ಕಡಿವಡಿಯದೆ ಪೆಸರಡೆಯುವಸದರಿಂದ।ಲಾತುಮ॒ ‖ ೧ ‖

ನಾನಾರೂಪದ ಕೊಡಸೊಳಗಿರುವ | ಬಯಲು ತಾ | ನಾನದೆ ರೂಪವ ಬೇರಿರುವ ‖ ಮಾನದೊಳಾತುಮ ಹೀನೋಚ್ಚರೂಪಗ।ಳೂ ಣೆಯಿಲ್ಲದೆ ಕಾಣುವಸದರಿಂದ।ಲಾತುಮ॒ ‖ ೨ ‖

ಬಗೆಬಗೆ ಕೆಲಸವ ಸಮನಿಸುವ | ಪಾತ್ರೆಗಳಿಂಡ | ಮಿಗಿಲಾಗಿ ಬಯಲು ತಾ ಸೊಗಯಿಸುವ ‖ ಒಗೆಯಿಂಪಲಾತುಮನೊಗೆದಾರು ವಿಕೃತಿಯ। ಮಿಗುತೆ ಶಂಕರನಾಗಿ ಸೊಗವಿರ್ಪಸದರಿಂದ।ಲಾ॒ ‖ ೩ ‖

[ **ಕೊಂಬುವ ಪಡಿಯೊಳಗೆ-ಹೊಂದುವ ಹಾಗೆ, ಒಡಲಿನ-ಶರೀರದ, ಆನದೆ-ಹೊಂದದೆ, ಊಣೆಯ-ದೋಷ, ಸಮನಿಸುವ-ಮಾಡುವ, ಮಿಗಿಲಾಗಿ-ಹೆಚ್ಚಾಗಿ, ಪಾತ್ರೆಗಳಿಗಿಂತ ಬೇರೆಯಾಗಿ; ಆರುವಿಕೃತಿಯ-ಇರುವದು, ಹುಟ್ಟುವದು, ಬೆಳೆಯುವದು, ಮಾರ್ಪಡುವದು, ಸೊರಗುವದು, ಹಾಳಾಗುವದು ಎಂಬ ವಿಕಾರಗಳನ್ನು; ಸೊಗವಿರ್ಪನು-ಸುಖದಿಂದಿರುವನು.** ]

---

**೪೯.** ಕೇತಾರಗೌಳ, ರೂಪಕ.

ಬರಿಯ ಬಯಕೆ ಸಾಕುಮಾಡು।ಪೆರತಿನ್ನೇನು ಬೇಕು ನೋಡು ‖ ಪ ‖
ಸರುವನಾಗಿ ನಿರುತನಿರುವೆ | ಸರನೆ ಬಯಲ ಭವಣೆ ಥರವೆ ? ‖ ಅ ‖

ವ್ಯೋಮವಾಯುವಹ್ನಿವಾರಿ | ಭೂಮಿಗಳಿವು ನೀನು ಶೌರಿ ‖ ಕಾಮಕಾಮನಲ್ಲವಾಪ್ತ | ಕಾಮನೂ—**ನೀ ಮನದೊಳು ನಿಜವನರಿದು** ‖ ೧ ‖

ಲೋಕಲೋಕಪಾಲರೂಪ | ನೇಕನೀನೆ ವಿಗತತಾಪ ‖ ಶೋಕ ಮೋಹವಿಲ್ಲ ಸೌಖ್ಯ | ದೇಕತಾನ—ನೇಕಿದನೀಂ ನಿರುಕಿಸದಿಹೆ ‖ ೨ ‖

ಯೋಗಿಯಾಗಿ ತಪವಮಾಳ್ಪೆ।ಭೋಗಿಯಾಗಿ ಸೊಗವ ನೋಳ್ಪೆ‖ ತ್ಯಾಗಿಯಾಗುತಾತ್ಮನಿಷ್ಠ | ನಾಗುವೇ—ನೀಗಿ ಮನದ ಕಸವರಿಕೆಯ ‖

ದೇಹಕರಣವಿಷಯವೆಲ್ಲ । ಮೋಹಿಸೆ ನೀನಲ್ಲದಿಲ್ಲ ॥ ಬಾಹ ಭೋಗ
ಪೆರತಿಪಲ್ಲ । ಬೇಹುದೇ–ನೀ ಹದನನು ನಿನ್ನೊಳರಿತು ॥ ೫ ॥

ನಿನ್ನ ಸಿರಿಯುನಂತವಯ್ಯ । ಭಿನ್ನವೆಣಿಸದಿರು ದಮ್ಮಯ್ಯ ॥
ಬಿನ್ನಪವಿದ ತಿಳಿದು ನೋಡು । ನನ್ನಿಯಿಂ–ದಿನ್ನಹೆ ನೀಂ ಗುರುಶಂಕರ ॥

[ಪೆರತು-ಬೇರೆ, ಕಾಮುಕಾಮುನಲ್ಲ-ವಿಷಯಕಾಮಿಯಲ್ಲ, ಏಕತಾನ-ಏಕರಸ, ನಿರುಕಿಸದಿಹೆ-ನೋಡದೆ ಇದ್ದೀಯೆ, ಬಾಹ ಭೋಗ-ಬರುವ ಸುಖ, ಈ ಹದನನು-ಈ ವಿಷಯವನ್ನು.]

---

**೩೦.** ಮಾಯಾಮಾಳವಗೌಳ, ಏಕತಾಳ.

ಮುಕ್ತಿಗೆ ಸಾಧನ ಬೇಕಿಲ್ಲ– ಜ್ಞಾನ ಸಾಕಲ್ಲ।
ಯುಕ್ತಿಯೊಳಿದ ತಿಳಿಯಲು ಬಲ್ಲಾ–ತಗೆ ಬಂಧವಿಲ್ಲ ॥ ಪ ॥

ಕೈಲಾಸ ವೈಕುಂತ ಮೊದಲಾದ–ಕರ್ಮಕೃತವಾದ । ದೇಶ ।
ಕಾಲಾಂತರದೆ ಪಡೆಯುವದಾದ–ಗತಿ ಬಹುಖೇದ । ನಿಜ ॥ ೧ ॥

ಇಲ್ಲದಿಹ ಮುಕ್ತಿ ಬರಲಾರದಲ್ಲ–ಬರೆ ನಿಲ್ಲದಲ್ಲ । ನಾ ।
ನೆಲ್ಲರು ಮುಕುತರು ಬಂಧವೆಲ್ಲ–ಮಿಥ್ಯವಲ್ಲದಿಲ್ಲ ॥ ೨ ॥

ಆತ್ಮಂಗೆ ಗುಣದೋಷಗಳಿಲ್ಲ–ನಿಷ್ಕಲನಲ್ಲ । ಪರ ।
ಮಾತ್ಮಂಗೆ ಸಂಸ್ಕಾರವು ಸಲ್ಲ–ಹೊಲ್ಲೆಹವಲ್ಲ ॥ ೩ ॥

ಆತ್ಮನು ಬ್ರಹ್ಮವಾಗುವದಿಲ್ಲ–ಆಗಲಹುದಿಲ್ಲ । ಎ ।
ಪ್ರಾತ್ಮನೆ ಬ್ರಹ್ಮವೆಂದಿಹುದೆಲ್ಲಾ–ಶ್ರುತಿ ಸಟೆಯಲ್ಲ ॥ ೪ ॥

ಇಲ್ಲಿ ಈಗ ಮುಕುತರು ನಾವೆಲ್ಲ––ಬಂಧನೆ ಇಲ್ಲ !
ವಲ್ಲಭ ಶಂಕರಗುರು ಬಲ್ಲ–ವೇದಸಾರವೆಲ್ಲ ॥ ೫ ॥

[ದೇಶಕಾಲಾಂತರದೆ-ಬೇರೊಂದು ದೇಶದಲ್ಲಿ ಬೇರೊಂದು ಕಾಲಧಲ್ಲಿ, ಸಂಸ್ಕಾರ-ಗುಣವನ್ನು ಹೆಚ್ಚಿಸುವದು ಅಥವಾ ದೋಷವನ್ನು ತೆಗೆದುಹಾಕುವದು, ನಿಷ್ಕಲ-ಅವಯವಗಳಿಲ್ಲದ.]

---

೫೧. ಮಧ್ಯಮಾವತಿ, ಝಂಪೆ.

ಜಗದೆ ನಾಸಿಲ್ಲವೀ ಜಗವೆನ್ನೊಳಿಹುದು ‖ ಪ ‖

ಬಗೆಗಾಣಲಿದ ಭವದ । ಬಗೆಯು ಸಡಿಲಹುದು ‖ ಅ ‖

ಕನಸಿನಲಿ ನಿದ್ರಿಸಿದೆ ಕನವರಿಸುತೆಚ್ಚತ್ತೆ । ನೆನಲೆಲ್ಲವದು ನನ್ನ ಕನಸಲ್ಲವೆ? ‖ ಇನಿಗಾಲ ನಿದ್ರೆಯುಸು ಕನಸನೆಚ್ಚರವ ತಾ । ನನುಭವಿ ಸಲದುವು ಬರಿಗನಸಲ್ಲವೆ? ‖ ೧ ‖

ಸನ್ನಿ ಹಿಡಿದಿರುವವಗೆ ತನ್ನೊಳಗೆ ತೋರ್ಪ ಪಲ । ವಣ್ಣದಾ ನೋಟಗಳು ಭಿನ್ನವಿಹವೆ? ‖ ಎನ್ನ ಮರಹಿಲಿ ತೋರುವನ್ನತದ ಜಗವಿದೇ । ನೆನ್ನ ಬಿಟ್ಟರೆಗಳಿಗೆಯಿನ್ನಿರುವದೆ? ‖ ೨ ‖

ದೇಶಕಾಲನಿಮಿತ್ತದಾಸರೆಯು ಕರ್ಮಫಲ । ವೋಸರಿಸುತಿಹ ಕರ್ತೃ ಭೋಕ್ತೃವರ್ಗ ‖ ಈಸು ಕಲ್ಪನೆಗಳಿಂ ಮಾಸದಿಹ ಶಂಕರಗೆ । ವಿನಾಸಲಾಗಿಹ ವೈಮೆಗೀಶ ನಾಸು ‖ ೩ ‖

[ಇನಿಗಾಲ-ಇಷ್ಟು ಕಾಲ, ಪಲವಣ್ಣದ-ಬಗೆಬಗೆಯ, ಎನ್ನ ಮರಹಿಲಿ-ನನ್ನ ವಿಷಯವಾದ ಅಜ್ಞಾನದಲ್ಲಿ, ಆಸರೆ-ಆಶ್ರಯವಾದ ಮನಸ್ಸು, ಓಸರಿಸುತಿಹ-ಒಂದು ಕಡೆಯಲ್ಲಿ ತೋರುವ, ಈಸು-ಇಷ್ಟು, ವಿನಾಸಲಾಗಿಹ-ಅವನಿಗೇ ಸಲ್ಲುವ.]

---

೫೨. ಶಂಕರಾಭರಣ, ರೂಪಕ.

ಇದು ಕೈವಲ್ಯಸುಖ ‖ ಪ ‖

ಇದು ಕೈವಶವಾಗೆ ನಿತ್ಯಸುಖ ‖ ಅ ‖

ಕರ್ಮೋಪಾಸನೆಯೊಲ್ಲದ । ದುರ್ಮತತರ್ಕಕೆ ಸಲ್ಲದ ‖ ಮರ್ಮ ವಿಡಿದು ಗುರುಬೋಧೆಯ । ಪೆರ್ಮೆಯಿಂದ–**ಲೊರ್ನೋದಲೊಳಿ ಶರ್ಮವಿಡಿವು** । ದಿದು ‖ ೧ ‖

ಮಿತಿಮಾತೃಮೇಯಮಾನ । ಗತಿಯುಮಿರ್ದ ಸ್ವಯಂಭಾನ ‖ "ನ ತು ತದ್ವಿತೀಯ"ಮೆಂಬ । ಶ್ರುತಿಬೋಧಿತ–ಸ್ಥಿತಿಯಲಿ ಸುಸ್ಥಿತ ನಾಗಿಹು । ದಿದು ‖ ೨ ‖

ಸ್ಥಾನತ್ರಯದಲಿ ಕಾಣುವ | ಸ್ಥಾನಿಯ ಧರ್ಮವ ನೇಸುವ ‖ ಮಾನವೆ ತನ್ನೊಳೆ ತಾನಿಹ | ಮೌನಿ ಶಂಕರಾನುಮತಸ್ಥಾನದೊಳಿಹು | ದಿದು ‖ ೩ ‖

[ಪೆರ್ಮೆ-ಹೆಚ್ಚಿಗೆ. ಒರ್ಮೊದಲೊಳೆ-ಮೊಟ್ಟಮೊದಲಿ, ಶರ್ಮ-ಸುಖ, ಮಿತಿ-ಪ್ರಮಾಣದ ಫಲ, ಮಾತೃ-ಪ್ರಮಾಣವನ್ನು ಪ್ರಯೋಗಿಸುವವನು, ಮೇಯ-ವಿಷಯ, ಮಾನ-ಪ್ರಮಾಣ, ಸ್ವಯಂಭಾನ-ತಾನೇ ಕಾಣುವ, ಸ್ಥಾನತ್ರಯ-ಮೂರವಸ್ಥೆ, ಸ್ಥಾನಿ-ಅವಸ್ಥಾವಂತ, ಜೀವ; ಏನುವನು-ಏನನ್ನೂ, ಅನುಮತ-ಒಪ್ಪಾದ.]

---

೫೩. ಮುಖಾರಿ, ಆದಿತಾಳ. [‘ನಲಿದಾಡೆನ್ನ ನಾಲಿಗೆಯ ಮೇಲೆ’]

ಏನೆಂದು ಬಣ್ಣಿಸಲಹುದೀ ಸ್ಥಿತಿಯ | ಆನಂದವಿಭೂತಿಯ ‖ ಪ ‖

**ಹೀನೋಚ್ಚಾದಿವಿಭೇದವನುಳಿಯುತೆ | ತಾನೇ ತಾನಾಗಿರುವುಪರತಿಯ |** ನೇನೆಂದು ‖ ಅ ‖

ಆಕಾಶಾಂತವಡಗಿದಾ ಭೂತಗಳು | ತನ್ಮಾತ್ರೆಗಳಂತೆಯ | ನೇಕಾತ್ಮಕವಹ ಕರಣೋಪೇತಗಳು | ತತ್ಕ್ರಿಯೆಗಳೈದು ನಾ | ಲ್ಕಾಕಾರದ ಪ್ರಾಣಮನೋವೃತ್ತಗಳು ‖ **ಈ ಕಾಯೇಂದ್ರಿಯದೋಕದೊಳಿರುತೆ | ಲ್ಲಾ ಕೆಲಸವ ತಾ ನೂಕುವ ಜೀವನು | ಮೇಕಾತ್ಮನೊಳೆಲ್ಲಾ ಕಲೆತಿರುವದ |** ನೇನೆಂದು ‖ ೧ ‖

ಇರವಿಲ್ಲಾಗಿಹ ಹದಿನಾರು ಕಲೆಗಳು | ಪ್ರಾಣಾದಿಗಳವು ಬರಿ | ಮರಹೆಂಬುವ ಮರುಜಲದೇರಿದಲೆಗಳು | ಕನಸಿನ ಬಲು ವೈಸಿರಿ | ಮುರುಕಾಮವು ಹರಡಿದ ಪೀಸುಬಲೆಗಳು ‖ ಅರಿವಿನ ಪಿರಿನೇಸರು ತಾನುದಯಿಸೆ | ಸರಕನೆ ರೂಪುನೆಸರ ತೊರೆಯುತೆ ಪರ | ಪುರುಷನಾಗಿಯೇ ದೊರೆಪಡೆದಿರ್ಪುದ | ನೇನೆಂದು ‖ ೨ ‖

ಪುಣ್ಯಾಪುಣ್ಯಗಳನು ಸಲೆಮೀರಿರುವ | ತದ್ವಾಸನೆಯಿಂದೊಗೆ | ದನ್ಯಾದೃಶಕಾಮುಕೆ ಬಲು ಬೇರಿರುವ | ಮರಹನು ತಾ ಮುಟ್ಟದ | ನನ್ಯಾತ್ಮತೆಯಿಂದಲೆ ಪರಮನೊಳಿರುವ ‖ ಸಂನ್ಯಸ್ತಾಖಿಲಫನ್ನಾಕೃ

ತಿನಾ | ಮೋನ್ನತಸುಖ ಭಯಶೂನ್ಯತೆಯಲಿ ಸ | ನ್ಮಾನ್ಯಶಂಕರನ ಧನ್ಯತೆಪಡೆವುದ | ನೇನೆಂದು ‖ ೩ ‖

[ ಉಳಿ-ಬಿಡು, ಉಪರತಿ-ವಿಕ್ರಿಯೆ ಇಲ್ಲದಿರುವದು, ಆಕಾಶಾಂತ-ಪಂಚಭೂತಗಳು, ಕರಣ-ಹತ್ತು ಇಂದ್ರಿಯಗಳು, ತತ್ಕ್ರಿಯೆಗಳು-ಅವುಗಳ ಕೆಲಸ, ಐದುನಾಲ್ಕುಕಾರ-ಪ್ರಾಣಕ್ಕೆ ಐದು, ಮನಸ್ಸಿಗೆ ನಾಲ್ಕು; ಓಕ-ಸ್ಥಾನ, ಪಿರಿನೇಸರು-ಪ್ರಚಂಡ ಸೂರ್ಯ, ದೊರೆವಡೆದು-ಪ್ರಸಿದ್ಧವಾಗಿ, ಅನ್ಯಾದೃಶಕಾಮ-ಹೆಚ್ಚಿನ ಕಾಮ, ಸಂನ್ಯಸ್ತಾಖಿಲಭಿನ್ನಾಕೃತಿನಾಮ-ಬೇರೆಬೇರೆಯ ನಾಮರೂಪಗಳನ್ನೆಲ್ಲ ಬಿಟ್ಟ. ]

---

೫೪. ದ್ವಿಜಾವಂತಿ, ಅಟತಾಳ.

ಮರೆವುದಾಗದು ಬ್ರಹ್ಮವ | ನರಿಯೆ ಮತ್ತೆ ‖ ಪ ‖

ಮರೆವುದಾಗದು ಮರಹರಿವಿಗೆ ಸಾಕ್ಷಿಯ | ಮರೆವನಾತುಮನಾಗಿರುವ ಕಾರಣದಿಂದ ‖ ಅ ‖

ದೇಹವಾತುಮನೆಂಬುವ | ಜ್ಞಾನವು ತಾನು | ದೇಹವಿಂ ಪೆರನೆಂಬುವ ‖ ಊಹಿಸಿ ಶಾಸ್ತ್ರದಿಂ ತಿಳಿದರಿವಿಂದಲೇ | ಹೋಹ ತೆರದೆ ಶ್ರುತಿ ಸೋಹಂಬೋಧೆಯಿಂದೆ ‖ ೧ ‖

ಲೌಕಿಕಮಾನಂಗಳು | ಬಾಧಿಸಲಾತ್ಮ | ನೈಕನೆಂಬುವ ಕಂಗಳು ‖ ಏಕಭಾವದೆ ಕರಗಲೀ ಕನಸಿನ ತಿಳಿ | ವೇಕಾತ್ಮನ ಬೋಧೆಗೇಕಡ್ಡಬರುವುದು ? ‖ ೨ ‖

ಮಾನವಸ್ತ್ವವ ನೆಮ್ಮಿದ | ಜ್ಞಾನವು ವ | ಸ್ತ್ವಧೀನವಾಗಿಯೆ ಹೊಮ್ಮಿದ ‖ ಭಾನಕೆ ಬಾಧಕವೇನುವಿಲ್ಲವಾಗಿ | ತಾನೆ ಶಂಕರನೆಂದು ಕಾಣಲೊಮ್ಮೆ ಮತ್ತೆ ‖ ೩ ‖

[ ಮರೆವನಾತುಮ-ಮರೆಯುವವನಿಗೂ ಆತ್ಮ, ಊಹಿಸಿ-ಅನುಮಾನ ಪ್ರಮಾಣದಿಂದ, ಸೋಹಂಬೋಧೆ-ನಾನೇ ಬ್ರಹ್ಮನೆಂಬ ಅರಿವು, ಲೌಕಿಕಮಾನಂಗಳು-ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳು, ನೈಕನೆಂಬುವ-ಆತ್ಮನು ಅನೇಕನೆಂಬ. ಕನಸಿನ ತಿಳಿವು-ಸುಳ್ಳು ಬುದ್ಧಿ, ವಸ್ತ್ವಧೀನ-ಬ್ರಹ್ಮವೆಂಬ ಸತ್ಯವಸ್ತುವಿರುವ ರೀತಿಯಲ್ಲಿ. ಭಾನ-ಬ್ರಹ್ಮಪ್ರಕಾಶ. ]

---

೫೫. ಸೌರಾಷ್ಟ್ರ, ಅಟತಾಳ. [“ಎಚ್ಚರಿಕೆ ಭಾಗ್ಯ”]

ಧನ್ಯ ನಾನಾದೆನು ಕೃತಕೃತ್ಯನಾದೆನು, ಇನ್ನೇನಿನ್ನೇನು ॥ ಪ ॥
ಮಾನ್ಯನು ಮಾನಿತವಂದ್ಯ ನಾನಾದೆನು, ಇನ್ನೇನಿನ್ನೇನು ॥ ಅ ॥

ಸದಯ ಸದ್ಗುರು ಕೃಪಾಸುಧೆಯೊಳು ಮುಳುಗಿದೆ । ನಿನ್ನೇ ೦ ॥
ಹೃದಯದ ಗಂಟುಗಳಿದೆ ಬಿಚ್ಚಿ ಕಳೆದಿದೆ । ಇನ್ನೇ ೦ ॥ ೧ ॥

ಪಾಪಪುಣ್ಯಗಳೆಂಬ ಪಾಶವು ಹರಿಯಿತು । ಇನ್ನೇ ೦ ॥
ತಾಪತ್ರಯವೆಂಬ ತ್ರಾಸವು ತೀರಿತು । ಇನ್ನೇ ೦ ॥ ೨ ॥

ಸರ್ವಸಂಶಯಗಳು ಸರಿದವು ಕೆಲಕೀಗ । ಳಿನ್ನೇ ೦ ॥
ಶರ್ವಶಂಕರದೇವದರುಶನದೊಲವಾಗ । ಲಿನ್ನೇ ೦ ॥ ೩ ॥

[ ಹೃದಯದ ಗಂಟುಗಳು-ತೊಡಕಾಗಿರುವ ಕಾಮಗಳು, ತಾಪತ್ರಯ-ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂದು ಮೂರು ಬಗೆಯಾಗಿರುವ ತಾಪ; ಕೆಲಕೆ-ಒಂದು ಕಡೆಗೆ. ]



೫೬. ಮುಖಾರಿ, ಅಟತಾಳ.

ಸತ್ಯವೆ ಗೆದ್ದಿತು ಸಟೆ ಸೋತುಹೋಯಿತು ಹೊಡೆಯಿರೊ ಡಂಗುರವ ॥ ಪ ॥

ಮಿಥ್ಯಾದುರ್ಗದ ಕೋಂಟೆಕೊತ್ತಳ ಮುರಿಯಿತು ಹೊಡೆಯಿರೊ ಡಂಗುರವ ॥ ಅ ॥

ಸತ್ಯವು ಧರ್ಮವು ಸ್ವೀಕರಿಹರೆಂದು । ಹೊಡೆಯಿರೊ ೦ ॥
ನಿತ್ಯಬ್ರಹ್ಮಚರ್ಯನಿಗಮು ಸಮ್ಮವು ಎಂದು । ಹೊಡೆಯಿರೊ ೦ ॥ ೧ ॥

ದೂರದ ರಾಜ್ಯ ಸಮ್ಮುದುರಿಗೆ ಬಂತೆಂದು ಹೊಡೆಯಿರೊ ೦ ॥
ನೇರವಾಗಿ ಲಗ್ಗೆಯೇರೆ ಕೈವಶವೆಂದು । ಹೊಡೆಯಿರೊ ೦ ॥ ೨ ॥

ಪ್ರಣವದ ಬಿಲ್ಲಿನೊಳಾತ್ಮ ಶರವ ಹೂಡಿ । ಹೊಡೆಯಿರೊ ೦ ॥
ದಣಿವಿಲ್ಲದೆಚ್ಚು ದೂಡಿದೆವು ದೋಷವನೆಂದು । ಹೊಡೆಯಿರೊ ೦ ॥ ೩ ॥

ದೇವಯಾನದ ದೂರಧಾಳಿಯಿನ್ನೇಕೆಂದು । ಹೊಡೆಯಿರೊ ।
ಸಾವಿಲ್ಲದ ಸುಖ ಸೂರೆಯಾಯಿತು ಎಂದು । ಹೊಡೆಯಿರೊ ॥೪॥

ಪಂಚಕೋಶದ ಒಳಸಂಚು ಮುರಿಯಿತೆಂದು ಹೊಡೆಯಿರೊ ।
ಮುಂಚಿನ ಸ್ವಾರಾಜ್ಯ ಹೊಂಚಿ ಪಡೆದೆವೆಂದು । ಹೊಡೆಯಿರೊ ॥೫॥

ಏಕತ್ವರಾಜ್ಯ ಸುಖೈಕತಾನವೆಂದು । ಹೊಡೆಯಿರೊ ।
ಶೋಕಮೋಹಗಳಿಗಿನ್ನೇಕಂಜುವಿರೆಂದು । ಹೊಡೆಯಿರೊ ॥೬॥

ಸುಂಕಸುಲಿಗೆಗಳ ಸೋಂಕಿಲ್ಲವಿಲ್ಲೆಂದ । ಹೊಡೆಯಿರೊ ।
ಶಂಕರರಾಜ್ಯ ಶಿವಂಕರ ಪ್ರಜೆಗೆಂದು । ಹೊಡೆಯಿರೊ ॥೭॥

[ **ಕೊತ್ತಳ-ಬುರುಜು, ಅಗ್ಗಿಯೇರು-ಹಲ್ಲಹತ್ತು, ಶಿವಂಕರ-ಮಂಗಲವನ್ನು ಮಾಡುವದು.**]

---

**೫೭.** **ರಾಗ, ಶಂಕರಾಭರಣ, ಆದಿತಾಳ.**

ಎಲ್ಲವು ಬ್ರಹ್ಮವಿದು । ಆರಯ್ದು ನೋಡ।ಲೆಲ್ಲವು ॥ ಪ ॥

ಎಲ್ಲವು ಬ್ರಹ್ಮವಿನ್ನಿಲ್ಲ ಬೇರೆಂಬುವ । ಸಲ್ಪ ವೇದಾಂತದ ಸೊಲ್ಲನರಿತು ನೋಡ।ಲೆಲ್ಲವು ॥ ಅ ॥

ಎಡಗಡೆ ಬ್ರಹ್ಮವು ಬಲಗಡೆ ಬ್ರಹ್ಮವು । ಪಡಗಡೆ ಮುಂಗಡೆಯೆಲ್ಲ ಬ್ರಹ್ಮ ॥ ಅಡಿಯೊಳಗಂತೆ ಮೇಗಡೆಯೊಳು ಹೊರಗಿನ । ಕಡೆಯೊಳಗೆಲ್ಲವು ಕಡಿವಡೆಯದ ಬ್ರಹ್ಮ।ವೆಲ್ಲವು ॥ ೧ ॥

ಆದಿಗಿಂದಿಗೂ ಬ್ರಹ್ಮ ಮುಂದಕೂ ಬ್ರಹ್ಮವು । ಎಂದೆಂದಿಗೂ ಇಹುದೊಂದೆ ಬ್ರಹ್ಮ ॥ ಅಂದಿಂದೆಂಬುದರಂದವ ನಿವಾರಿಸಾ । ಸಂದದೆ ಸಿಂದಿಹ ಚೆಂದದ ಪರಬ್ರಹ್ಮ ॥ ೨ ॥

ನಾಮವು ಬ್ರಹ್ಮವು ರೂಪವು ಬ್ರಹ್ಮವು । ನೇಮದ ಕರ್ಮ, ಕಾರಕ, ಫಲ ಬ್ರಹ್ಮ ॥ ನಾಮರೂಪನ ಕರ್ಮಸೀಮೆಯ ಮೀರಿದು । ಸಾಮಹಾನಂದದ ಧಾಮ ಶಂಕರ ಬ್ರಹ್ಮ ॥ ೩ ॥

[ ಕಾರಕ-ಮಾಡುವವನು, ಮಾಡಿಸಿಕೊಳ್ಳುವದು, ಸಾಧನ, ಮಾಡುವ ಸ್ಥಳ ಮುಂತಾದದ್ದು; ಸೀಮೆ-ಎಲ್ಲೆಕಟ್ಟು. ]

---

೫೮. ರಾಗ, ಮೋಹನ, ಆದಿತಾಳ.

ನಾನೇ ಬ್ರಹ್ಮವು ಬೇರಲ್ಲ ॥ ಪ ॥

ನಾನಲ್ಲದೆ ಪೆರತೊಂದಿಲ್ಲ । ಇದೊ । ನಾನೇ ನಾನಾಗಿಹೆನಲ್ಲ ॥ ಅ ॥

ಸೂರಿಯು ಚಂದಿರರೊಳಗೆಲ್ಲ । ಮುದ । ವೇರೆ ಬಿಡದೆ ಬೆಳಗುವೆನಲ್ಲ ॥ ತಾರಗೆಮಿಂಚಿಲಿ ತೋರುತೆ ಬೆಂಕಿಗೆ । ಮೀರಿದ ಸೂಡನು ಸೂಡಿಪೆನಲ್ಲ ॥ ೧ ॥

ಹೂಹಣ್ಣುಗಳಲಿ ತೆರವಿಲ್ಲಾ । ಗಿಹ । ರೂಹು ಸವಿಯು ವಾಸನೆಯೆಲ್ಲ ॥ ಜೋಹವಿದೆನ್ನಯ ಮಾಹಾತ್ಮ್ಯವು ಕವಿ । ಗಾಹ ಸೊಗದ ಸಿರಿಗಾನವದೆಲ್ಲ ॥ ೨ ॥

ಬೆಟ್ಟವು ನದಿ ಮುನ್ನೀರೆಲ್ಲ । ನಾ । ತೊಟ್ಟ ತೊಡಿಗೆಯಿದು ಹುಸಿಯಲ್ಲ ॥ ದಟ್ಟಡವಿಯು ಬಲು ಬಟ್ಟಬಯಲು ಪುರ । ಪಟ್ಟಣಗಳು ಎನ್ನಿಷ್ಟವಿದೆಲ್ಲ ॥ ೩ ॥

ನರನಾರೀಜನರೂಪೆಲ್ಲ । ನಾ । ಧರಿಸಿದ ಮಾಯೆಯು ಮತ್ತಿಲ್ಲ ॥ ಚರಜಂಗಮಜೀವರುಗಳ ಕಲ್ಪಿಸಿ । ಮೆರೆಯಿಪ ನಾಟಕವಿದು ಸಟಿಯಲ್ಲ ॥ ೪ ॥

ಎಚ್ಚರು ಕನಸು ನಿದ್ರೆಗಳೆಲ್ಲ । ಜನ । ರಿಚ್ಛೆಯ ಕಲ್ಪನೆಯಲ್ಲದಿಲ್ಲ । ಸಿಚ್ಚವು ಮಾರ್ಪಡದಚ್ಛರೂಪಿನಲಿ । ಸಚ್ಚಿತ್ಸುಖ ಶಂಕರನಿಹೆನಲ್ಲ ॥ ೫ ॥

[ಸೂಡನು-ಶಾಖವನ್ನು, ಸೂಡಿಪೆನು-ಮುಡಿಸುತ್ತೇನೆ, ಉಂಟುಮಾಡುವೆನು; ತೆರವಿಲ್ಲಾಗಿ-ಸ್ವಲ್ಪವೂ ಬಿಡದೆ ತುಂಬಿ, ರೂಹು-ಆಕಾರ, ಬಣ್ಣ; ಜೋಹ-ವೇಷ-ಆಕಾರ; ಮುನ್ನೀರು-ಸಮುದ್ರ.]

---

೫೯. ರಾಗ, ನಾದರಾಮಕ್ರಿಯೆ, ಆದಿತಾಳ.

ಎನ್ನೈಸಿರಿಯಿದನಂತ । ಭಲೆ । ಇನ್ನೇನಿಹುದಿದಕಿಂತ ॥ ಪ ॥

ಚೆನ್ನಿಸೆವೆಲ್ಲಾ ನಾಮರೂಪಕರ್ಮೋ । ನ್ನತ ಜಗವನು ವಿಾರಿರು ವಂಥ ॥ ಅ ॥

ಕಾಲಾಕಾಶದೊಳಾನು । ಮೇಣ್ । ಕಾಲಾಕಾಶಗಳಾನು ॥ ಕಾಲಾಕಾಶವ ವಿಾರುತಲೆನ್ನಯ । ಮೇಲುಮೆಯೊಳಗಿಹೆ ನಾನು ॥ ೧ ॥

ಪಂಚಭೂತದೊಳು ನಾನು । ಮೇಣ್ । ಪಂಚಭೂತಗಳು ನಾನು ॥ ಪಂಚಪ್ರಾಣೇಂದ್ರಿಯ ತತ್ಕ್ರಿಯೆ ಮನ । ದಂಚ ವಿಾರಿರುವೆ ನಾನು ॥ ೨ ॥

ಸುರನರದೈತ್ಯರೊಳಾನು । ಮೇಣ್ । ಸುರನರದೈತ್ಯರು ನಾನು ॥ ಸುರನರದೈತ್ಯರ ಭೇದವಿಲ್ಲದಾ । ಪರತರಶಂಕರ ನಾನು ॥ ೩ ॥

[ ಐಸಿರಿ-ಐಶ್ವರ್ಯ, ಮೇಣ್-ಮತ್ತು, ಮೇಲುಮೆ-ಮಹಿಮೆ, ಅಂಚ-ಎಲ್ಲೆ ಕಟ್ಟನ್ನು. ]

---

**೬೦. ಸುರಟಿ, ಅಟತಾಳ.**

ಮಂಗಲಂ ಮಂಗಲಂ । ಶಂಕರನಿಗೆ ॥ ಪ ॥

ಕಾಲಟೀಭಾಗ್ಯದ ಬಾಲನಿಗೆ । ಕಲಿ । ಕಾಲದೋಷಹರಲೀಲನಿಗೆ ॥ ಪಾಲಿತಮೋಕ್ಷಾಶ್ರಮಲೋಲನಿಗನು । ವೇಲವೈರಾಗ್ಯಸುಶೀಲನಿಗೆ । ಸದಾ ॥ ೧ ॥

ರೇವಾತೀರವಿಭೂಷನಿಗೆ । ಗುರು । ಗೋವಿಂದ ಚರಣಶುಶ್ರೂಷನಿಗೆ ॥ ಭಾವಿತಾರ್ಥಶ್ರುತಿಶೀರ್ಷನಿಗೆ । ತತ್ತ್ವ । ಭಾವಪ್ರಕಾಶಕ ಭಾಷನಿಗೆ । ಸದಾ ॥ ೨ ॥

ನಿರ್ಜಿತತಾರ್ಕಿಕವಾದನಿಗೆ । ಪರಿ । ವರ್ಜಿತಮಾಯಗಭೇದನಿಗೆ ॥ ಭರ್ಜಿತಭವಬೀಜಾಮೋದನಿಗೆ । ದೋಷ । ವರ್ಜಿತಶಂಕರನಾದನಿಗೆ । ಸದಾ ॥ ೩ ॥

[ ಮೋಕ್ಷಾಶ್ರಮ-ಸಂನ್ಯಾಸಾಶ್ರಮ, ಅನುವೇಲ-ಹೆಚ್ಚಾದ, ರೇವಾ-ನರ್ಮದಾ, ಭರ್ಜಿತ-ಹುರಿಯಲ್ಪಟ್ಟ, ಭವಬೀಜ-ಸಂಸಾರದ ಕಾರಣ, ಅವಿದ್ಯೆ; ಶಂಕರ-ಪರಮೇಶ್ವರ. ]

ತಿಳಿಗನ್ನಡ ಉತ್ತಮ

# ಅಧ್ಯಾತ್ಮಗ್ರಂಥಾವಳಿ

**ಸಾಧನಪ್ರಧಾನವಾದ ಗ್ರಂಥಗಳು—**

೧. ಅಧ್ಯಾತ್ಮಗೀತಾವಳಿ ೦—
೨. ಗುರುಭಕ್ತಿಸಾರ ಕುಸುಮಷಟ್ಪದಿಯ ಗ್ರಂಥ. ೦—
೩. ಭಗವಚ್ಛರಣಸ್ತೋತ್ರ ಬ್ರಹ್ಮಾನಂದರವರು ಬರೆದ ಸಂಸ್ಕೃ
ಕನ್ನಡದಲ್ಲಿ ಅರ್ಥವೂ ವಿವರಣೆಯೂ ಇವೆ. ೦—
೪. ಹರಿಶರಣಾಷ್ಟಕ ಭಗವಚ್ಛರಣಸ್ತೋತ್ರದಂತೆಯೇ ೦—
೫. ಸರ್ವೇಷ್ಟಸಿದ್ಧಿ ಸಾಧನಚತುಷ್ಟಯವನ್ನು ತಿಳಿಸುವದು. ೦—
೬. ಸಮುದ್ರಮಥನ ಕಾದಂಬರಿಯು ಹಾಗಿರುವ ಆಖ್ಯಾನ ೦—
೭. ವಾಗ್ದೇವೀಸ್ತೋತ್ರ ಭಜನೆಗೆ ಅನುಕೂಲವಾಗಿದೆ. ೦—

**ಸಿದ್ಧಾಂತಪ್ರಧಾನವಾದ ಗ್ರಂಥಗಳು—**

೮. ವೇದಾಂತಬಾಲಬೋಧೆ ಪ್ರಾತಃಸ್ಮರಣಸ್ತೋತ್ರದ ಪ್ರಶ್ನೋತ್ತ
ವಿವರಣೆ. ವೇದಾಂತವಿಚಾರವನ್ನಾರಂಭಿಸುವವರಿಗೆ ತಕ್ಕದ್ದು ೦—
೯. ವೇದಾಂತಕಥಾವಳಿ ಕಥೆಗಳ ಮೂಲಕ ವೇದಾಂತದ ಪ್ರಕ್ರಿ
ತಿಳಿಸುವದು. ೨೨ ಕಥೆಗಳಿವೆ. ೦—
೧೦. ಮಾಂಡೂಕ್ಯೋಪನಿಷತ್ತು ಶ್ರೀಗೌಡಪಾದರವರು ಬರೆದ ಕಾ
ಆಗಮಪ್ರಕರಣ ಎಂಬ ಮೊದಲನೆಯ ಭಾಗ ೦—
೧೧. ವೈತಥ್ಯಪ್ರಕರಣ ,, ಎರಡನೆಯ ಭಾಗ. ೦—
೧೨. ಅದ್ವೈತಪ್ರಕರಣ ,, ಮೂರನೆಯ ಭಾಗ. ೦—
೧೩. ಈಶಾವಾಸ್ಯೋಪನಿಷತ್ತು ಭಾಷ್ಯಸಹಿತ ೦—
೧೪. ಮುಂಡಕೋಪನಿಷತ್ತು ೦—೧

ಮೇಲಿನ ಪುಸ್ತಕಗಳಿಗೆ ಟಪ್ಪಾಲು ಹಾಸಲು ಬೇರೆ. ೦—೮—೦ಗಿಂತ ಕ
ಪುಸ್ತಕಗಳನ್ನು ವಿ. ಪಿ. ಮಾಡುವದಿಲ್ಲ. ವ್ಯಾಪಾರಿಗಳಿಗೂ ಹೆಚ್ಚು ಪುಸ್ತ
ಕೊಳ್ಳುವವರಿಗೂ ಕಮಿಶನ್ ಉಂಟು.

ಅಧ್ಯಾತ್ಮಪ್ರಕಾಶಕಾರ್ಯಾಲಯ,
೨ನೆಯ ಬೀದಿ, ಚಾಮರಾಜ
ಬೆಂಗಳ

ಅಧ್ಯಾತ್ಮಪುಸ್ತಕಾಲಯ, ಅರಸೀಕೆರೆ.